


39 ನೇ ಕನ್ನಡ ರಾಜ್ಯೋತ್ಸವವನ್ನು ನವಂಬರ್ 30, ಶ್ರೀ ಮಠದಲ್ಲಿ ಆಚರಿಸಲಾಯಿತು. ಜ್ಞಾನಪೀಠ ಪ್ರಶಸ್ತಿ ವಿಜೇತ **ಡಾ॥ ಕೆ. ಶಿವರಾಮ ಕಾರಂತರು** ವಿದ್ಯಾರ್ಥಿಗಳನ್ನು ಕುರಿತು ಮಾತನಾಡುತ್ತಿರುವುದು. ಶ್ರೀ ಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ನೇತ್ರದಾಸಿ ಪದ್ಮಭೂಷಣ **ಡಾ॥ ಎಂ. ಸಿ. ಮೋದಿ** ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕೊನೆಯಲ್ಲಿ ಶ್ರೀ ಶ್ರೀಗಳವರ ವಜ್ರಮಹೋತ್ಸವ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪ ಐ.ಎ.ಎಸ್. ಅವರು ಉಪಸ್ಥಿತರಿದ್ದಾರೆ.

---

# ಸಿದ್ಧಗಂಗಾ

ಸಂಪುಟ-30. ಸಂಚಿಕೆ 12 ಡಿಸಂಬರ್-1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ನಾಮ ಸೀಮೆಯ ಮೀರಿ ಬೆಳೆದ ಕಾರುಣ್ಯವೆ
ಕಾಮ ಕ್ರೋಧವ ಗೆದ್ದ ಭವ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ §

ಶರಣಗಣ ತಿಲಕವೆ ಪರಮ ವೈರಾಗ್ಯವೆ
ಕರುಣ ಸಾಗರವೆ ಧರೆ ಭಾಗ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ತನು ಮೀಸಲಾಯಿತು ಜಗದ ಕಲ್ಯಾಣಕೆ
ಮನ ಮೀಸಲಾಯಿತು ಲಿಂಗಕ್ಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | — | |
| * ಶ್ರೀ ಸಿದ್ಧಲಿಂಗೇಶ್ವರ ವಚನ | — | |
| * ಸಂಪಾದಕೀಯ | — | |
| * ಸಹ್ಯಾದ್ರಿ ತೇಜ ! | —ಶಾರದಾಜಡೆ | 11 |
| * ಹಿಂದು-ಮುಸ್ಲಿಂ ಧರ್ಮ ಸಮನ್ವಯದ ಪ್ರತೀಕಃ ಸಾವಳಗಿಯ ಪೀಠ | —ಮಹಾಲಿಂಗ ಮಂಗಿ | 12 |
| * ರಹಸ್ಯಮಯ ಆಹ್ವಾನಗಳು "ಭವ್ಯಮಾನವ"ದ ಝಳುಕುಗಳು | —ಅಣ್ಣಪ್ಪ ಮಟ್ಟೀಕಲ್ಲಿ | 14 |
| * ವಚನ ಸಾಹಿತ್ಯ ಘಟ್ಟಗಳು : ಒಂದು ವಿವೇಚನೆ | —ಡಾ|| ವ್ಹಿ.ಜಿ. ಪೂಜಾರ | 20 |
| * ಮಹಾಕವಿ ಕುವೆಂಪು | —ಕವಿತಾಕೃಷ್ಣ | 30 |
| * ಮಾನವನ ಆದ್ಯ ಕರ್ತವ್ಯ | —ಪ. ರಾಮಕೃಷ್ಣಶಾಸ್ತ್ರಿ | 33 |
| * ಕ್ಷೇತ್ರವಾರ್ತೆ | —ಹೆಚ್. ಬಿ. ಗಂಗಾಧರಯ್ಯ | 39 |
| * ವಿದ್ಯಾರ್ಥಿಗಳಿಗೆ ಸಂದೇಶ | —ಹೆಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ | 42 |

# ಶ್ರೀ ವಾಣಿ



## ಟಿ. ವಿ.

ಆಧುನಿಕ ಜೀವನ ಯಂತ್ರಮಯವಾಗಿದೆ. ಮಾನವ ಶಕ್ತಿಯ ಸದುಪಯೋಗವಾಗುತ್ತಿಲ್ಲ. ವೈಜ್ಞಾನಿಕ ಉಪಕರಣಗಳು, ಸಲಕರಣೆಗಳು ವಿಜೃಂಭಿಸುತ್ತಿವೆ. ತೊಟ್ಟಿಲಿನಿಂದ ರುದ್ರಭೂಮಿಯವರೆಗೆ ಯಂತ್ರೋಪಕರಣಗಳ ನೃತ್ಯ ನಡೆದಿದೆ. ವಿದ್ಯುನ್ಮಾನಯುಗವಂತೂ ಶರವೇಗದಲ್ಲಿ ಓಡುತ್ತಿದೆ. ಕುಟ್ಟಲು, ಬೀಸಲು, ರುಬ್ಬಲು, ಜೇಯಿಸಲು, ಬಟ್ಟೆ ಒಗೆಯಲು, ದವಸ ಧಾನ್ಯ ಚಿತ್ತಲು ಕಣದಲ್ಲಿ ತೂರಲು ಒಂದೇ ಎರಡೇ ಎಲ್ಲದಕ್ಕೂ ಯಂತ್ರಗಳೇ, ಇತ್ತೀಚೆಗಂತೂ ಬಂದಿರುವ ಸಮೂಹ ಪ್ರಸಾರ ಮಾಧ್ಯಮವಾದ ದೂರದರ್ಶನದ ಉಪಯೋಗ ಸಮಾಜದಲ್ಲಿ ವಿಪರೀತವಾಗಿದೆ. ಬೆಳಿಗ್ಗೆ ಮಧ್ಯಾಹ್ನ ಸಂಜೆ ರಾತ್ರಿಗಳೆನ್ನದೆ ಯುವ ಜನಾಂಗದ ಜತೆಗೆ ಪ್ರೌಢ ವಯಸ್ಕರೂ ಟಿ.ವಿ; ಟಿ.ವಿ; ಟಿ.ವಿ ಮುಂದೆಯೇ ಕುಳಿತಿರುವ ದೃಶ್ಯ ಕಾಣುತ್ತಿದೆ. ನಗರ ಪಟ್ಟಣಗಳ ಜೀವನ ವಿರಲಿ ಗ್ರಾಮ ಜೀವನದಲ್ಲೂ ಟಿ.ವಿಯ ಹಾವಳಿ ಹೇಳತೀರದು. ಮಹಿಳೆಯರಂತೂ ಟಿ.ವಿಗೇ ಅರ್ಪಿಸಿಕೊಂಡು ಬಿಟ್ಟಿದ್ದಾರೆ. ಮನೆಗೆ ಬಂದ ಅತಿಥಿ, ಅಭ್ಯಾಗತರ ಸತ್ಕಾರಕ್ಕೂ ಗಮನ ಕೊಡದಷ್ಟು ಟಿ.ವಿಗೆ ದಾಸರಾಗುತ್ತಿದ್ದಾರೆ. ಅಡುಗೆ ಮನೆಯಲ್ಲಿ, ಊಟದ ಮನೆಯಲ್ಲಿ, ಟಿ.ವಿ ರಾರಾಜಿಸುತ್ತಿದೆ. ಟಿವಿಯಲ್ಲಿ ಪ್ರಸಾರ ವಾಗುತ್ತಿರುವ ಕಾರ್ಯಕ್ರಮಗಳಂತೂ ಯುವ ಜನಾಂಗದ ವೈಚಾರಿಕತೆಯನ್ನೇ ಬೇರು ಸಮೇತ ಕತ್ತರಿಸುತ್ತಿವೆ. ಸಂಸ್ಕೃತಿ ಸಾಯುತ್ತಿದೆ, ದೇಶಾಭಿಮಾನ, ಮಾನವೀಯತೆಗಳಂತೂ ಕಣ್ಮರೆಯಾಗುತ್ತಿವೆ. ರಾಕ್ಷಸ ನೃತ್ಯ ಪ್ರತಿಮನೆಯಲ್ಲೂ ನಡೆದಿದೆ. ಮಕ್ಕಳು ಓದುತ್ತಿಲ್ಲ. ವಿದ್ಯಾರ್ಥಿಗಳು ವ್ಯಾಸಂಗದಲ್ಲಿ ಶ್ರದ್ಧೆ ಕಳೆದು ಕೊಳ್ಳುತ್ತಿದ್ದಾರೆ ಮನರಂಜನೆಯ ಹೆಸರಿನಲ್ಲಿ ವಿಕಾರಗಳು ಪ್ರದರ್ಶಿಸುತ್ತಿವೆ. ಅಪರೂಪಕ್ಕೊಂಬಂತೆ ಕೆಲವೊಂದು ಕಾರ್ಯಕ್ರಮಗಳು ಯೋಗ್ಯವಾಗಿ ಮೂಡಿ ಬರುತ್ತವೆ. ವಾರ್ತಾ ಪ್ರಸಾರಕ್ಕಾಗಿಯಷ್ಟೆ ನಾವು ಟಿ.ವಿ ನೋಡುತ್ತೇವೆ. ನಿರ್ಮಾಣವಾದ ವೈಜ್ಞಾನಿಕ ಉಪಕರಣಗಳನ್ನು ಜೀವನ ವಿಕಾಸಕ್ಕೆ ಬಳಸಬೇಕೇ ಹೊರತು ವಿನಾಶಕ್ಕಾಗಿಯಲ್ಲ.

'ಸಿದ್ಧಗಂಗಾ' ಮೂರು ದಶಕಗಳನ್ನು ಪೂರ್ಣಗೊಳಿಸಿ ನಾಲ್ಕನೇ ದಶಕಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ನಮ್ಮ ಓದುಗರಿಗೆ, ಆಜೀವ ಸದಸ್ಯರುಗಳಿಗೆ, ಜಾಹಿರಾತುದಾರರಿಗೆ ಮತ್ತು ಲೇಖನಗಳನ್ನು ನೀಡುತ್ತಿರುವ ಲೇಖಕ ಬಳಗಕ್ಕೆ ಹೃತ್ಪೂರ್ವಕವಾದ ಧನ್ಯವಾದಗಳು.

ಪತ್ರಿಕಾರಂಗದಲ್ಲಿ ಎಡರು ತೊಡರುಗಳು ಸಾಮಾನ್ಯ ಆದಾಗ್ಯೂ, ಅವೆಲ್ಲವನು ಪರಿಹಾರ ಮಾಡಿಕೊಂಡು 30 ವರ್ಷಗಳ ಕಾಲ ನಾಡ ನುಡಿಯ ಸೇವೆ ಸಲ್ಲಿಸಿ ಮುನ್ನಡೆಯುತ್ತಾ ನಾಡಿನಾದ್ಯಂತ ಪ್ರಸಾರ ವಿಸ್ತರಿಸಿಕೊಂಡು ಮೆಚ್ಚುಗೆಗಳಿಸಿರುವುದನ್ನು ತಮಗೆಲ್ಲಾ ತಿಳಿಸಲು ಸಂತೋಷವಾಗುತ್ತಿದೆ. ಇದಕ್ಕೆ ಶ್ರೀ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀಗಳವರ ಅನುಗ್ರಹ ಆಶೀರ್ವಾದಗಳು ರಕ್ಷೆಯಾಗಿವೆ.

ಪ್ರಕಾಶಕರು.

---

ವಿ.ಸೂ

**ಮಾನ್ಯ ಓದುಗರಲ್ಲಿ ವಿನಂತಿ,**

ಮುದ್ರಣ ಕಾಗದ ಮತ್ತು ಮುದ್ರಣಸಾಮಗ್ರಿ ಖರ್ಚು–ವೆಚ್ಚಗಳು ಇತ್ತೀಚೆಗೆ ತುಂಬಾ ಏರಿಕೆಯಾಗಿರುವುದರಿಂದ ಪತ್ರಿಕೆಯ ಚಂದಾವನ್ನು ಕೆಳಗೆ ಸೂಚಿಸಿರುವಂತೆ ಪರಿಷ್ಕರಿಸಲಾಗಿದೆ. ಓದುಗರು ಸಹಕರಿಸ ಬೇಕಾಗಿ ಕೋರಿದೆ.

ಜನವರಿ–1995 ರಿಂದ

**ವಾರ್ಷಿಕ ಚಂದಾ :–** **35/– ರೂಗಳು**

**ಆಜೀವ ಸದಸ್ಯತ್ವ ಚಂದಾ :=** **500/– ರೂಗಳು**

ಪ್ರಕಾಶಕರು.

---

**—: ಆಜೀವ ಸದಸ್ಯರಿಗೆ ಸೂಚನೆ :—**

ಸಿದ್ಧಗಂಗಾ ಮಾಸ ಪತ್ರಿಕೆ ತಪ್ಪದೆ ನಿಮ್ಮ ಕೈ ಸೇರಲು ವಿಳಾಸ ಬದಲಾವಣೆಯನ್ನು ಚಂದಾ ಸಂಖ್ಯೆ ಸೂಚಿಸಿ ಕೂಡಲೆ ಕಾರ್ಯಾಲಯಕ್ಕೆ ತಿಳಿಸಬೇಕಾಗಿ ವಿನಂತಿ.

ಪ್ರಕಾಶಕರು.

# ಶ್ರೀ ಸಿದ್ಧಲಿಂಗೇಶ್ವರ ವಚನ



ಸರ್ವಾಂಗವನು ಲಿಂಗನಿಷ್ಠೆಯಲ್ಲಿ ಘಟ್ಟಿಗೊಳಿಸಿ
ಮನದ ಉನ್ಮನಿಯಾವಸ್ಥೆಯನೆಯ್ದಿಸಿ
ಶತಪತ್ರದಲ್ಲಿ ಸ್ಥಿತಿಟ್ಟು ಲಿಂಗಕ್ಕೆ ಅರ್ಪಿಸದ ನೈವೇದ್ಯವ
ಲಿಂಗನೆನಹಿನಲ್ಲಿಯೆ ಸ್ವೀಕರಿಸುವುದು.
ಅಂಗಾರ್ಪಿತವ ವಿಸರ್ಜಿಸುವುದಯ್ಯ?
ತಟ್ಟುವ ಮುಟ್ಟುವ ಸೋಂಕುವ ಮರ್ಮವನರಿದು
ಲಿಂಗ ಮುಖಕ್ಕೆ ನಿವೇದಿಸಿ
ಲಿಂಗ ಪ್ರಸಾದವ ಸ್ವೀಕರಿಸುತ್ತಿರ ಬಲ್ಲರೆ
ಪ್ರಸಾದಿಸ್ಥಲವಿದೆಂಬೆನಯ್ಯಾ!
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ದೇಹದ ಒಂದು ಭಾಗದಲ್ಲಿ ಇಷ್ಟಲಿಂಗ ಸಂಬಂಧವಾಗಿದ್ದರೂ ಅದು ಇಡೀ ದೇಹವನ್ನೇ ವ್ಯಾಪಿಸಿ ಸಾಧಕ ಮುಮುಕ್ಷುವನ್ನು ಸರ್ವಾಂಗ ಲಿಂಗಮಯನಾಗುವಂತೆ ಮಾಡುವುದು. ಆಗ ಅವನ ಎಲ್ಲ ಇಂದ್ರಿಯಗಳೂ ಲಿಂಗಸ್ವರೂಪವನ್ನೇ ಹೊಂದುವವು ಅದರಂತೆ ವಿಷಯದತ್ತ ಓಡುವ ಸ್ವಭಾವದ ಮನಸ್ಸುಕೂಡ ಲಿಂಗದಲ್ಲಿ ಲಯವಾಗಿ ತನ್ನ ಅಧೋಗತಿಯನ್ನು ಬಿಟ್ಟು ಊರ್ಧ್ವಗತಿಯನ್ನು ಹೊಂದುವದು. ಆಗ ಸಾಧಕನ ಪ್ರತಿಯೊಂದು ವಿಷಯದ ಭೋಗವು ಲಿಂಗ ಮುಖಕ್ಕೆ ಅರ್ಪಿತವಾದದ್ದೆ ಇರುವುದರಿಂದ ಅವನು ಲಿಂಗಭುಕ್ತ್ಯೋಪಯೋಗಿ ಯೆನಿಸುವನು. ಅವನನ್ನೇ 'ಪ್ರಸಾದಿ, ಎಂದು ಹೇಳಲಾಗುವುದು. ಇಲ್ಲಿ ಭಕ್ತಿ ಶಕ್ತಿಯು ಅವಧಾನರೂಪವನ್ನು ಪಡೆಯುವುದು. ಸಾಧಕನು ತನ್ನ ಲಿಂಗೇಂದ್ರಿಯಗಳಿಂದಲೇ ಪ್ರಸಾದ ಭೋಗ ನಡೆಸುವಲ್ಲಿ ಅತ್ಯಂತ ಸಾವಧಾನ ಎಚ್ಚರವನ್ನು ವಹಿಸುವನು.

[ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ, ಶ್ರೀ ತೋ. ಸಿ. ಕೈ. ಸೇ ಸಂಘ ಎಡೆಯೂರ–ಗದಗ]

## ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ವರತಿಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

**1–1–95 ರಿಂದ ಚಂದಾ ದರ**
ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

**ಕುವೆಂಪು.**

10–11–94 ರಂದು ಕುವೆಂಪು ಅಸ್ತಂಗತರಾದರು. ಕನ್ನಡದ ಧೀಮಂತ ಚೇತನ ಅನಿಕೇತನವಾಯಿತು. ನಾಮ ರೂಪಗಳನ್ನು ದಾಟಿ ಅನಂತವಾಯಿತು. "ಕನ್ನಡವನೆ ಕವಿ ನಿಮಿರುವುದು" ಎನ್ನುತ್ತಿದ್ದ ಕುವೆಂಪು ವಿಶ್ವಮಾನವರಾಗಿ ಬಾಳಿ ಬೆಳಗಿದರು. ಅವರಿಗೆ ಕನ್ನಡ ಮಂತ್ರವಾಗಿತ್ತು, ದೇವರಾಗಿತ್ತು. ಜೀವನ-ಮುದ್ದಕ್ಕೂ 'ಕನ್ನಡ ಡಿಂಡಿಮ' ವನ್ನು ಬಾರಿಸಿದರು; ಕನ್ನಡಕ್ಕಾಗಿ ಹೋರಾಡಿ-ದರು. ಮಲೆನಾಡಿನ ಸಿರಿಬಸಿರಿನಿಂದ ಮೂಡಿ ಬಂದ ಪುಟ್ಟಪ್ಪನವರು 20 ನೆಯ ಶತಮಾನದಲ್ಲಿ ಕನ್ನಡ ನಾಡು ವಿಶ್ವ ಸಾಹಿತ್ಯಕ್ಕೆ ಅರ್ಪಿಸಿದ ಮಹಾಕವಿ. ಅವರು ನಡೆದು ಬಂದ ದಾರಿ ಹೂವಿನಹಾಸಿಗೆಯೇನೂ ಅಲ್ಲ. ಉಚ್ಚವರ್ಗ-ದವರ ಮೂದಲೆ, ಭರ್ತ್ಸನೆಗಳಿಗೆ ಎದೆಸೆಟೆಸಿ, ಸಡ್ಡು ಹೊಡೆದು ಹೆಜ್ಜೆ ಹಾಕಿದರು. ಕುವೆಂಪುರವರಲ್ಲಿ ಎದ್ದು ಕಾಣುತ್ತಿದ್ದ ಗುಣ 'ಛಲ'. "ಛಲಬೇಕು ಶರಣಂಗೆ ಅನ್ಯದೈವವನೊಲ್ಲೆನೆಂಬ' ಎಂಬಂತೆ ಕನ್ನಡವನ್ನುಳಿದು ಅವರಿಗೆ ಬೇರೆ ಕಾಣಲಿಲ್ಲ. ಕುವೆಂಪು ಅವರು ಮಾಡಿದ ಸಾಹಿತ್ಯಸೇವೆ ದೊಡ್ಡದು, ಅದಕ್ಕಿಂತಲೂ ಅವರು ಸೃಷ್ಟಿಸಿದ ಸಾಹಿತಿಗಳ ಸಂಖ್ಯೆ ಇನ್ನೂದೊಡ್ಡದು. ಕತೆ, ಕಾದಂಬರಿ, ಕವನ, ನಾಟಕ, ವಿಮರ್ಶೆ, ಜೀವನ ಚರಿತ್ರೆ ಮುಂತಾಗಿ ಸಾಹಿತ್ಯದ ಎಲ್ಲ ಪ್ರಕಾರ-ಗಳಲ್ಲೂ ಅವರು ಕೃಷಿಗೈದಿದ್ದಾರೆ. 'ಶ್ರೀ ರಾಮಾಯಣದರ್ಶನಂ' ಇಪ್ಪತ್ತನೆ ಶತ ಮಾನದಲ್ಲಿ 'ಭುವನದ ಭಾಗ್ಯ' ವೆಂಬಂತೆ ಮೂಡಿ ಬಂದ ದಾರ್ಶನಿಕ ಕಾವ್ಯ. ಕುವೆಂಪುವನ್ನು ಸೃಜಿಸಿದ ಮೇರುಕೃತಿ. ಕಳೆದು ಹೋದ ಮಲೆನಾಡಿನ ಸಸ್ಯ ಸಂಪತ್ತನ್ನು, ಪಕ್ಷಿಸಂಪತ್ತನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಚಿರಂತನವಾಗಿ ಉಳಿಸಿಕೊಟ್ಟ ಕರ್ಣಾಟಕದ ವರ್ಡ್ಸ್‌ವರ್ತ್ ಕುವೆಂಪು. ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮಧುಮಗಳು ಬೃಹತ್ ಕಾದಂಬರಿಗಳು ಮಲೆನಾಡಿನ ಕೌಟುಂಬಿಕ ಜೀವನಕ್ಕೆತ್ತಿಹಿಡಿದ ಸ್ತಂಭ ದೀಪಗಳು. 'ಬೊಮ್ಮನ ಹಳ್ಳಿಯ ಕಿಂದರಿಜೋಗಿ' ಮಕ್ಕಳಿಗಾಗಿ ಬರೆದ ಸುಂದರ ಕವನ. ರಾಮಕೃಷ್ಣ ಪರಮಹಂಸರ ಜೀವನದಿಂದ

ಪ್ರಭಾವಿತರಾದ ಕುವೆಂಪು ಆಧ್ಯಾತ್ಮ ಜೀವಿಯಾಗಿ ವಿಶ್ವಮಾನವರಾದರು. ಉಪನ್ಯಾಸಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಕುಲಪತಿಗಳಾಗಿ ಸೇವೆಸಲ್ಲಿಸಿದ ಕೆ.ವಿ. ಪುಟ್ಟಪ್ಪನವರು ಸತ್ಪರಂಪರೆಯನ್ನು ಸ್ಥಾಪಿಸಿದರು. ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಬರುವುದಿದ್ದರೆ ಅದು ಮೊದಲಿಗೆ ಕುವೆಂಪು ಅವರಿಗೇ ಸಲ್ಲಬೇಕು ಎನ್ನುವಂತೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಪಂಪ ಪ್ರಶಸ್ತಿ, ಕರ್ನಾಟಕ ರತ್ನ, ಮುಂತಾಗಿ ಪ್ರಶಸ್ತಿಗಳು ಕವಿಯನ್ನು ಅಲಂಕರಿಸಿದವು. ಕುಪ್ಪಳ್ಳಿಯಲ್ಲಿ ಕಣ್ ಬಿಟ್ಟ ಕುವೆಂಪು ಕನ್ನಡದ ಕಣ್ಣಾಗಿ ಬಾಳಿದರು. ಕಂಪಾಗಿ ಅರಳಿದರು.

ಅಗಲಿದ ಕವಿ ಚೇತನಕ್ಕೆ "ಸಿದ್ಧಗಂಗಾ" ಭಕ್ತಿ ಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

---

## ಆಹ್ವಾನ ಪತ್ರಿಕೆ

ದಿನಾಂಕ 15-1-95 ರ ಭಾನುವಾರ ಶ್ರೀ ಮಠದಲ್ಲಿ ಪರಮ ಪೂಜ್ಯ **ಶಿವಯೋಗಿ ಶ್ರೀ ಉದ್ದಾನ ಸ್ವಾಮಿಗಳವರ** 54 ನೆ ಪುಣ್ಯಾರಾಧನೆ ಮಹೋತ್ಸವ ಬೆಳಿಗ್ಗೆ 9-00 ಘಂಟೆಗೆ ನಡೆಯುವಂತೆ ಏರ್ಪಾಟಾಗಿದೆ.

ಮತ್ತು

15-1-95 ರ ಭಾನುವಾರ ಅಪರಾಹ್ನ 2-00 ಘಂಟೆಗೆ ಗ್ರಾಮಾಂತರ **ಬಸವ ಜಯಂತಿ** ವಾರ್ಷಿಕ ಸಮಾರೋಪ ಸಮಾರಂಭ ನಿಯೋಜಿತವಾಗಿದೆ.

ಎರಡೂ ಸಮಾರಂಭಗಳಲ್ಲಿ ಹರಗುರು ಚರಮೂರ್ತಿಗಳು, ವಿದ್ವಾಂಸರು, ಅನುಭಾವಿಗಳು ಭಾಗವಹಿಸುತ್ತಾರೆ.

ಶ್ರೀ ಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಸಮಾರಂಭಗಳಲ್ಲಿ ಭಾಗವಹಿಸ ಬೇಕಾಗಿ **ಸಿದ್ಧಗಂಗಾ** ಪ್ರಾರ್ಥಿಸುತ್ತದೆ.

## ಶ್ರದ್ಧಾಂಜಲಿ

ಮಾಜಿ ರಾಷ್ಟ್ರಪತಿ ಗ್ಯಾನಿಜೇಲ್‌ಸಿಂಗ್ ಅಗಲಿಕೆ ರಾಷ್ಟ್ರಕ್ಕೆ ತುಂಬಲಾಗದ ನಷ್ಟವಾಗಿದೆ. ಸಾಮಾನ್ಯ ರೈತ ಕುಟುಂಬದಲ್ಲಿ ಜನಿಸಿ ದೇಶದ ಅತ್ಯುನ್ನತ ಪದವಿಗೇರಿದ ಅವರ ವ್ಯಕ್ತಿತ್ವ ವೈಶಿಷ್ಟ್ಯಪೂರ್ಣವಾದುದು. ರಾಜ್ಯ ಮತ್ತು ಕೇಂದ್ರ ಮಟ್ಟದಲ್ಲಿ ಅನೇಕ ಹುದ್ದೆಗನ್ನು ಅಲಂಕರಿಸಿ ಉತ್ತಮ ದಕ್ಷ ಆಡಳಿತಗಾರರಾಗಿದ್ದರು. ಅವರ ಜಾಕ್ಯಾತೀತ ಮನೋಭಾವ, ರಾಜಕೀಯ ಮುತ್ಸದ್ದಿನ ಯುವಜನತೆಗೆ ಸ್ಮರಣಾರ್ಹವಾಗಿವೆ. ದೇಶದ ಏಕತೆ ಮತ್ತು ಸಮಗ್ರತೆಗಾಗಿ ವಿಶೇಷ ಪ್ರಭಾವ ಬೀರುತ್ತಿದ್ದರು. ಸರಳತೆಗೆ, ಪ್ರಾಮಾಣಿಕತೆಗೆ ಮತ್ತು ಆದರ್ಶಗಳಿಗೆ ಸಾಕಾರ ಮೂರ್ತಿಯಾಗಿದ್ದರು. ಅವರ ನಿಧನದಿಂದ ನಮ್ಮ ಭಾರತ ಸಮರ್ಥ ರಾಷ್ಟ್ರ ಭಕ್ತನನ್ನು ಕಳೆದುಕೊಂಡಂತಾಗಿದೆ.

ಬಸವಾದಿ ಪ್ರಮಥರು ಅವರ ಆತ್ಮಕ್ಕೆ ಚಿರ ಶಾಂತಿಯನ್ನು ಕರುಣಿಸಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ

—: ಪ್ರಕಟಣೆ :—

## ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ

### ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ–572 104

ಶ್ರೀ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆಯ ಅಂಗವಾಗಿ ಮಾಮೂಲಿನಂತೆ **32 ನೇ ವಸ್ತುಪ್ರದರ್ಶನ** 1995 ಫೆಬ್ರವರಿ 17-ಮಾರ್ಚಿ 3 ರ ವರೆಗೆ ನಡೆಯುವಂತೆ ವ್ಯವಸ್ಥೆ ಮಾಡಲಾಗಿದೆ.

* ಮಹಾಶಿವರಾತ್ರಿಯ ಜಾತ್ರೆಯ ಸಂದರ್ಭದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತಿರುವ ರಾಜ್ಯಮಟ್ಟದ ಏಕೈಕ ವಸ್ತು ಪ್ರದರ್ಶನ.
* ಕೇಂದ್ರ ಮತ್ತು ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ಅಭಿವೃದ್ಧಿ ಕಾರ್ಯಗಳ ಚಟುವಟಿಕೆಗಳನ್ನು ವಿಶೇಷ ಮಳಿಗೆಯನ್ನು ತೆರೆಯುವುದರೊಂದಿಗೆ ಭಾಗವಹಿಸುತ್ತವೆ.
* ಮನರಂಜನೆಗಾಗಿ ಸಂಗೀತ, ನಾಟಕ, ಕಲೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಆಕರ್ಷಕ ಕಾರ್ಯಕ್ರಮಗಳು ಸಂಜೆ ವೇಳೆ ನಡೆಯುತ್ತವೆ.
* ವಿವಿಧ ಉದ್ಯಮಗಳಿಗೆ ಈ ವಸ್ತು ಪ್ರದರ್ಶನ ಪ್ರಚಾರ ಮಾಧ್ಯಮಕ್ಕೆ ಉತ್ತಮ ಸಾಧನವಾಗಿದೆ.
* ಜಾತ್ರೆಗೆ ಬರುವ ರೈತ ಬಾಂಧವರು, ಯಾತ್ರಾರ್ಥಿಗಳು, ಭಕ್ತಾದಿಗಳು ತಪ್ಪದೆ ವಸ್ತು ಪ್ರದರ್ಶನನಕ್ಕೆ ಭೇಟಿ ನೀಡಿ ಜ್ಞಾನ-ತಿಳಿವಳಿಕೆ ಪಡೆದುಕೊಳ್ಳಿರಿ.
* ಮಳಿಗೆಗಳನ್ನು ತೆರೆಯಲು ಮತ್ತು ಇತರೆ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ. ಕಾರ್ಯದರ್ಶಿಗಳು, ವಸ್ತುಪ್ರದರ್ಶನ ಸಮಿತಿ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ–572 194.

ಓಂ

ಸ್ಥಾಪನೆ: 1954

# ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572 104.

## 40 ನೇ ಸರ್ವ ಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ.

**ಮಾನ್ಯರೇ,**

ನಮ್ಮ ಸಂಘದ 40 ನೇ ಸರ್ವ ಸದಸ್ಯರ ಮಹಾಧಿವೇಶನ ದಿನಾಂಕ 29-1-1995 ನೇ ಭಾನುವಾರ ಬೆಳಿಗ್ಗೆ 10 ಘಂಟೆಗೆ ಶ್ರೀ ಉದ್ದಾನೇಶ್ವರ ಸಮುದಾಯ ಭವನದಲ್ಲಿ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಗಳವರ ದಿವ್ಯ ಸಾನಿಧ್ಯದಲ್ಲಿ ಸಮಾವೇಶಗೊಳ್ಳುತ್ತದೆ.

ಸಭೆಯಲ್ಲಿ ವಜ್ರಮಹೋತ್ಸವದ ಸಮಿತಿ ಅಧ್ಯಕ್ಷ ಪದ್ಮಭೂಷಣ ಡಾ|| ಎಂ. ಸಿ. ಮೋದಿ ಮತ್ತು ಕಾರ್ಯಾಧ್ಯಕ್ಷ ಶ್ರೀ ಬಿ. ಎಸ್. ಮುದ್ದಪ್ಪ ಐ.ಎ.ಎಸ್. (ರಿ). ಅವರುಗಳು ಉಪಸ್ಥಿತರಿದ್ದು ಪ್ರತಿಷ್ಠಾನ ಯೋಜನೆಯ ಪ್ರಗತಿ ಮುನ್ನಡೆಯನ್ನು ಸಭೆಗೆ ತಿಳಿಸುತ್ತಾರೆ. ನೂತನವಾಗಿ ನಿರ್ಮಿಸುತ್ತಿರುವ ಮೇರು ಸಾಧನೆಯ ಸಂದೇಶವನ್ನು ಶತಮಾನಗಳವರೆಗೆ ಸಾರುವ ಸುಂದರ ಸ್ಮಾರಕಗಳಾದ "ಬೃಹತ್ ವಿದ್ಯಾರ್ಥಿ ನಿಲಯ, ಪ್ರಸಾದ ನಿಲಯ" ಸಭೆಯಲ್ಲಿ ಪಾಲ್ಗೊಂಡು ಯೋಜನೆ ಯಶಸ್ವಿಗೆ ನಿಮ್ಮ ನೆರವು ಮತ್ತು ಸಹಕಾರವನ್ನು ನೀಡಬೇಕೆಂದು ಕೋರುತ್ತೇವೆ.

ವಂದನೆಗಳೊಂದಿಗೆ

ತಮ್ಮ ವಿಶ್ವಾಸಿ

**ಡಾ|| ಎಂ. ಎನ್. ಚನ್ನಬಸಪ್ಪ**

ಪ್ರಧಾನ ಕಾರ್ಯದರ್ಶಿ

# ಸಹ್ಯಾದ್ರಿ ತೇಜ !

(ಮಹಾಕವಿ, "ಶ್ರೀ ಕುವೆಂಪು" ಅವರಿಗೆ ಅರ್ಪಿಸಿದ ಶ್ರದ್ಧಾಂಜಲಿ)

ತೇಜೋರಾಶಿಯಲಿಂದು,
ಲೀನಿಸಿದ ತೇಜವೇ;
ಕನ್ನಡವ ಬೆಳಗಿಸಿದ,
ಕವಿಕುಲದ ದೀಪ್ತಿಯೇ;
ನಿನಗೆನ್ನ ನಮನ.

ಸಹ್ಯಾದ್ರಿ ಸೊಬಗುಂಡು,
"ಉದಯರವಿ" ನೀನೆನಿಸಿ,
ಏರುತೇರುತ ಮೇಲೆ,
„ವಿಶ್ವಮಾನವನೇ" ಆಗಿಹೋದೆ.

'ಕುಲಪತಿ'ಯು ನೀನಿರ್ದೂ,
"ಗರ್ವದಿಂ ನಿನ್ನ ಶಿರ ನಿಮಿರಿ ನಿಲಲಿಲ್ಲ",
ಸಂಸಾರಿ ನೀನಾಗಿಯೂ,
"ಮೋಹದಲಿ ಮನ ಮುಳುಗಲಿಲ್ಲ"
"ಕುಮಾರವ್ಯಾಸನು ಹಾಡಿ'
ದ್ವಾಪರವ ಕಣ್ಣಲ್ಲಿ ಕುಣಿ" ಸಿದಂತೆ;

"ರಾಮಾಯಣದರ್ಶನಂ" ಗೈದು,
ತ್ರೇತೆಯನು ಕಣ್ಮುಂದೆ ನೀ ನಿಲ್ಲಿಸಿದೆ.
ಪ್ರಶಸ್ತಿ ಮಳೆಗರೆಯುತಿರೆ, ಅತ್ತ
'ಪರಮಹಂಸ' ನ ಸೇವೆಯಲ್ಲಿರ್ದೆ ನೀನಿತ್ತ;
ಓ, ದಿವ್ಯ ಚೇತನಾ;

ನಮ್ಮ ಧಮನಿಗಳಲ್ಲೂ, ನಿನ್ನ ಚೇತನ ಹರಿಸು;
ವಿಶ್ವಮಾನವರಾಗಿ, ಬಾಳುವುದಕಲಿಸು ;

ಓಂ ಶಾಂತಿ ಃ

**ಶಾರದಾ. ಜಡೆ.**

ಹೈದರಾಬಾದ್

# ಹಿಂದು-ಮುಸ್ಲಿಂ ಧರ್ಮ ಸಮನ್ವಯದ ಪ್ರತೀಕ: ಸಾವಳಗಿಯ ಪೀಠ

'ಮಂದಿರ-ಮಸೀದೆಗಳೆರಡನ್ನೂ ಹೋಲುವ ಸಾವಳಗಿ ಮಠದ ವಾಸ್ತು ಶಿಲ್ಪ' 'ಕೇಸರಿ–ಹಸಿರು' ಸಂಯುಕ್ತ ವರ್ಣಗಳ ಧ್ವಜ ಲಾಂಛನ! 'ಸಾಂಪ್ರದಾಯಿಕ ಹಸಿರು ಇಸ್ಲಾಂ ರಾಜಪೋಷಾಕಿನಲ್ಲಿ ವಿರಾಜಿಸುವ, ಹಿಂದೂ ವೀರಶೈವ ವಿರಕ್ತ ಪರಂಪರೆಯ ಪೀಠದ ಜಗದ್ಗುರು ಸನ್ನಿಧಿ!' 'ದೀನ್–ಹರಾಹರಾ' ಉದ್ಘೋಷ-ದೊಂದಿಗೆ ಸಹಸ್ರಾರು ಹಿಂದು-ಮುಸ್ಲಿಂ, ಸ್ತ್ರೀ ಪುರುಷ ಮೇಲುಕೀಳು ಭೇದಭಾವ-ವಿಲ್ಲದೆ ಅಗ್ನಿಹಾಯುವ ದೃಶ್ಯ ರೋಮಾಂಚನದ ಅನುಭವ! ಇದು ಗೋಕಾಕ ಸಾವಳಗಿ ಕ್ಷೇತ್ರದ ಕತೆ. 'ದೀನ್-ಹರಹರಾ' ಜಯಘೋಷದೊಂದಿಗೆ ಸುಡುವ ಕೆಂಡ ಗಳ ಮೇಲೆ ಬರಿಗಾಲಿನಿಂದ ನಡೆಯುವುದು ಪವಾಡ ಸದೃಶ ಸಂಗತಿಯಾದರೂ, ಇದಕ್ಕಿಂತ ಅದ್ಭುತ ಅಂದರೆ 'ಹಿಂದು-ಮುಸ್ಲಿಂ'ರು ಮತಧರ್ಮ, ದ್ವೇಷಾಸೂಯೆ-ಗಳಿಲ್ಲದೆ ಜಾತ್ರೆ ಉತ್ಸವದಲ್ಲಿ ಪಾಲ್ಗೊಳ್ಳುವುದು, ಮತ-ಧರ್ಮ, ಮಂದಿರ-ಮಸೀದಿಗಳ ದ್ವೇಷದ ದಳ್ಳುರಿಯಲ್ಲಿ ದೇಶ-ಸಮಾಜ ದಿಕ್ಕು ತಪ್ಪಿ ಬೆಂದುಹೋಗುತ್ತಿರುವಾಗ, ಸಾವಳಗಿಯ 'ದೀನ್-ಹರಹರಾ' ಧರ್ಮೈಕ್ಯತೆಯ ಸಂಜೀವಿನಿ ಮಂತ್ರದಂತಿದೆ. ವಿಭಿನ್ನಧರ್ಮ ಸಂಸ್ಕೃತಿ ಸಂಪ್ರದಾಯಗಳ ಅಪೂರ್ವ ಸಮಾಗಮ ಸಮಾವೇಶವನ್ನೂ ನಾವು ಬೆಳಗಾವಿ ಜಿಲ್ಲೆಯ ಸಾವಳಗಿ ಕ್ಷೇತ್ರ-ಜಾತ್ರೆಯಲ್ಲಿ ಪ್ರತ್ಯಕ್ಷ ಮನಗಾಣಬಹುದು.

ಗೋಕಾಕ ರೈಲು-ನಿಲ್ದಾಣದ ಪಶ್ಚಿಮಕ್ಕೆ ೪ಕಿ. ಮೀ. ಅಂತರದಲ್ಲಿ ಉತ್ತರವಾಹಿನಿ ಘಟಪ್ರಭೆ-ಹಿರಣ್ಯಕೇಶಿ ನದಿಗಳ ಸಂಗಮ ಬಳಿ, ಹಸಿರುವನಸಿರಿಯ ಮದ್ಯ ಶಿವಲಿಂಗೇ-ಶ್ವರ ಸಿದ್ದ-ಸಂಸ್ಥಾನ ಪೀಠ, ಜನ ಸಂಸ್ಕೃತಿಯ ರಾಯಭಾರಿಯಂತೆ ಸಕಲ ಜೀವಾತ್ಮ ಗಳಿಗೆ ಲೇಸನೆ ಬಯಸುತ್ತ ತಲೆ ಎತ್ತಿನಿಂತಿದೆ. ಕರ್ತೃ ಶ್ರೀ ಶಿವಲಿಂಗೇಶ್ವರರು ಬಾಳಿದ್ದು ೧೪-೧೫ನೇ ಶತಮಾನದಲ್ಲಿ ಸುಮಾರು ೬೫೦ವರ್ಷಗಳ ಹಿಂದೆ. ಕಲಬುರ್ಗಿಯ ಸತ್ಪುರಷ ಶ್ರೀ ಖಾಜಾಬಂದೇ ನವಾಜ ಶರೀಫರ ಸಮಕಾಲೀನರು. ಶಿವಲಿಂಗೇಶ್ವರರು ಮೂಲತಃ ಕಲಬುರ್ಗಿ ಜಿಲ್ಲೆ ಕೊಳ್ಳೂರು ಗ್ರಾಮದವರು. ಬಾಲ್ಯದಲ್ಲೇ ಆತ್ಮಜ್ಞಾನದ ಆಕರ್ಷಣೆಯಿಂದ ಮನೆಮಾರು ತೊರೆದು ಕಾಡಿನಲ್ಲಿ ಸಾಧನೆಗೈದು ಸಿದ್ಧ ಪುರುಷರೆನಿಸಿದರು.

ಕಲಬುರ್ಗಿಯ ಬಾದಶಹನಿಂದ ಪರಿಪರಿ ಪೀಡನೆಗೊಳಗಾದ ಶಿವಲಿಂಗೇಶ್ವರರು ತಮ್ಮ ಪವಾಡಗಳಿಂದ ಅವನ ಕಣ್ತೆರೆಸಿದರು. ಗುರು ಖ್ವಾಜಾಬಂದೇ ನವಾಜರ ಆದೇಶದ ಮೇರೆಗೆ ನವಾಬನು ಶಿವಲಿಂಗೇಶ್ವರರನ್ನು ಅರಮನೆಗೆ ಆಮಂತ್ರಿಸಲು ನವಾಜರೊಂದಿಗೆ ಬರುತ್ತಾನೆ. ಪವಾಡ ಪುರುಷ ಬಂದೇ ನವಾಜರು ಹೆಬ್ಬುಲಿಯೊಂದನ್ನು ಸವಾರಿ ಮಾಡಿಕೊಂಡು, ಸರ್ಪವನ್ನು ಕೈಯಲ್ಲಿ ಹಿಡಿದುಕೊಂಡು ಬಂದಾಗ, ಹಾಳುಗುಡಿಯ ಮೇಲೆ ಕುಳಿತಿದ್ದ ಶಿವಲಿಂಗೇಶ್ವರರು ತಾವು ಕುಂತ ನಿರ್ಜೀವ ಕಟ್ಟೆಯನ್ನೇ ಮುನ್ನಡೆಸಿ

ಕೊಂಡು ನವಾಜರನ್ನು ಎದುರುಗೊಂಡರಂತೆ. ಇವರ ವಿರಾಟಲೀಲೆಗೆ ನಿಬ್ಬೆರೆಗಾದ ಶ್ರೀ ಬಂದೇ ನವಾಜರು ಹುಲಿ ಇಳಿದು ಶರಣು ಬಂದಾಗ, ಶಿವಲಿಂಗೇಶ್ವರರು ಮುಂದಾಗಿ ಬಂದು ಬಂದೇ ನವಾಜರನ್ನು ಬಿಗಿದಪ್ಪಿಕೊಂಡರಂತೆ. ನಿಜಕ್ಕೂ ಯೋಗಿಗಳೀರ್ವರ ಅನುಪಮ ಸಮಾಗಮ ಅದು. ಆಗ ಭಾವಪರವಶರಾದ ಜನತೆಯಿಂದ 'ದೀನ್-ಹರಹರಾ' ಜೈಘೋಷ ಮೊಳಗಿತು. ಕಲಬುರ್ಗಿಯ ಬಾದಶಹನು ಶಿವಲಿಂಗೇಶ್ವರರನ್ನು ಅರಮನೆಗೆ ಕರೆದೊಯ್ದು, 'ಹಸಿರು ರೇಶ್ಮೆ ರಾಜ ಪೋಷಾಕು, ಜರದ ಪೇಟ, ಜೈತುನ ಮನಿ, ತಸ್ತಿ ಕಠಾರಿ, ಬೆಳ್ಳಿಬೆತ್ತ, ಮುದ್ರೆಯುಂಗರ, ಛತ್ರಚಾಮರ, ಬಿರುದುಗಳನ್ನೆಲ್ಲ ಸಮರ್ಪಿಸಿ, ತನ್ನ ಗದ್ದುಗೆ ಮೇಲೆ ಕೂರಿಸಿ, ಪೂಜೆ ವಂದನೆ ಸಲ್ಲಿಸಿ, 'ಜಗದ್ಗುರು' ವೆಂದು ಘೋಷಿಸಿ ಸನ್ಮಾನಿಸಿದನೆಂದು ಕತೆಯಿದೆ. ಆದರೆ ವೈಭವಬೇಡದ ಶಿವಲಿಂಗೇ-ಶ್ವರರು ಧರ್ಮಜಾಗೃತಿ-ಸಮಾಜೋದ್ಧಾರ ಮಾಡುತ್ತ ಸಂಚರಿಸುತ್ತ. ಗೋಕಾಕ ತಾಲೂಕಿನ ಸಾವಳಗಿಗೆ ಬಂದು, ಕೊನೆಗಿಲ್ಲಿ ಉತ್ತರವಾಹಿನಿ ಘಟಪ್ರಭೆ ತಟದಲ್ಲಿ ಹಸಿರುವನಸಿರಿಯ ಪ್ರಶಾಂತ ಮಡಿಲಲ್ಲಿ ನೆಲೆಸಲು ಮನಸ್ಸು ಮಾಡಿದರು. ಸಾವಳ-ಗಿಯ ಈ ತಪೋವನದಲ್ಲೇ ಲಿಂ||ಹೊಂದಿದರು. ಸಮಾಧಿ ಮೇಲೆ ಹಿಂದು ಮುಸ್ಲಿಂ ಭಕ್ತರು ಕೂಡಿ ಕೆಳಗರ್ಧಮಂದಿರ-ಮೇಲರ್ಧಮಸೀದಿಹೋಲುವ ವಿಶಿಷ್ಟ ವಾಸ್ತುಶಿಲ್ಪದ ಭವ್ಯಮಂದಿರ ನಿರ್ಮಿಸಿದ್ದಾರೆ. ಕೋಟೆಯಂತೆ ಸುತ್ತುವರೆದು ಮಠದ ಕಟ್ಟಡ-ಕೊಠಡಿಗಳಿವೆ. ಮಠದ ಸೇವಕ ಸಿಬ್ಬಂದಿಯಲ್ಲಿ ಹಿಂದು-ಮುಸ್ಲಿಮರೇ ಇದ್ದಾರೆ. ಶ್ರೀ ಶಿವಲಿಂಗೇಶ್ವರರು ಸಂಚರಿಸಿ ಜಪ-ತಪಗೈದ ಸ್ಥಾನಗಳಲ್ಲೆಲ್ಲ ಕಟ್ಟಿದ ಮಠಗಳು ಪೂಜಾಸ್ಥಾನಗಳಿವೆ. ಗುಲಬರ್ಗಾ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಮತ್ತು ಎರಡು ಸಾವಳಗಿ ಶಿವಲಿಂಗೇಶ್ವರ ಹೆಸರಿನ ಕ್ಷೇತ್ರಗಳಿದ್ದರೂ, ಯೋಗಿಯ ಐಕ್ಯ-ಸಮಾಧಿ ಸ್ಥಾನಕ್ಕೆ ಪ್ರಾಮುಖ್ಯ ಇರುವುದರಿಂದ ಬೆಳಗಾವಿ ಜಿಲ್ಲೆಯ ಗೋಕಾಕ ಸಾವಳಗಿ ಮನ್ನಣೆ ಪಡೆದ ಪ್ರಧಾನ ಗುರುಪೀಠ! ಕ್ಷೇತ್ರದ ಸಾಂಸ್ಕೃತಿಕ ಪರಂಪರೆಯೆಂದರೆ ಮಠದಲ್ಲಿ ಅನುಗಾಲ ಜ್ಞಾನ ಅನ್ನದಾಸೋಹ ಅನೂಚಾನವಾಗಿ ನಡೆದು ಬಂದಿವೆ. ಪ್ರತಿ ಅಮವಾಸ್ಯೆಯೂ ಜಾತ್ರೆ, ಶ್ರಾವಣ, ಕಾರ್ತಿಕಮಾಸಗಳು, ಶಿವರಾತ್ರಿ, ನವರಾತ್ರಿ ಉತ್ಸವಗಳ ೯ದಿನಗಳ ವೈಭವದ ಬೃಹತ್ ಜನ, ಜಾನವಾರು ಜಾತ್ರೆ ಉತ್ತರ ಕರ್ನಾಟಕದಲ್ಲೇ ಪ್ರಸಿದ್ಧ. ಬರೀ ಹುಗ್ಗಿ ಕಿಚಡಿಗೇ ಸೀಮಿತಗೊಳ್ಳದೆ, ಹಮ್ಮಿಕೊಳ್ಳುವ ಸಾಹಿತ್ಯ, ಸಂಗೀತ ಜಾನಪದ, ಕೃಷಿಬಗೆಗಿನ ವಿಚಾರ ಗೋಷ್ಠಿಗಳು ಆಟ, ನೋಟ, ಸ್ಪರ್ಧೆಗಳು ಜಾತ್ರೆಗೆ ವಿಶೇಷ ಮೆರಗು ಮಹತ್ವ ತಂದಿವೆ. ಹಿಂದೂ ಮುಸ್ಲಿಮರೆಲ್ಲರಿಗೂ ಸಮಾನ ಆದರ-ಣೀಯ ಉದಾತ್ತ ಪರಂಪರೆಯ ಗುರುಪೀಠ ಬಹುಶಃ ಭಾರತದಲ್ಲಿ ಮತ್ತೊಂದು ಇರಲಿಕ್ಕಿಲ್ಲ! ಧರ್ಮ ಸಮನ್ವಯ ಪ್ರತೀಕವಾದ ಸಾವಳಗಿ ಕ್ಷೇತ್ರಕ್ಕೆ ನಮ್ಮ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನ ಮರ್ಯಾದೆಗಳಿವೆ.

(ಸೌಜನ್ಯ :- ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ಕಾಮಲಾಪುರ–೫೮೩ ೨೭೧)

---

**ಮಹಾಲಿಂಗ ಮಂಗಿ** ೮೧/೪, ಗೋಕಾಕ ಫಾಲ್ಸ್–೫೯೧ ೩೦೮.

## ರಹಸ್ಯಮಯ ಆಹ್ವಾನಗಳು "ಭವ್ಯಮಾನವ"ದ ಝಳುಕುಗಳು

ಈ ವಿಶ್ವದಲ್ಲಿ ಮಾನವನ ಹುಟ್ಟು ರಹಸ್ಯಮಯ. ಮಾನವ ತನ್ನ ಜೀವನ ದುದ್ದಕ್ಕೂ ತನ್ನ ಹುಟ್ಟಿನ ಮೂಲ ಹಾಗೂ ಉದ್ದೇಶಗಳನ್ನು ತಿಳಿಯಲು ಹಾತೊರೆಯು ತ್ತಲೇ ಕಾಲ ಕಳೆದಿದ್ದಾನೆ-ಕಳೆಯುತ್ತಿದ್ದಾನೆ. ಅವನ ಈ ತೊಳಟಲಾಟವು ನಿರಂತರ ವಾದುದು, ಕೊನೆ ಮೊದಲಿಲ್ಲದುದು. ಕೊನೆಯು ಇಲ್ಲ, ಮೊದಲೂ ಇಲ್ಲವೆಂಬುದು ಅವನಿಗೆ ಗೊತ್ತಿದ್ದರೂ ಈ ತೊಳಲಾಟದಿಂದ ಅವನು ದೂರವಾಗಿಲ್ಲ, ದೂರವಾಗಲಾರ. ಇದೂ ಒಂದು ರಹಸ್ಯ

ಜಗದುದ್ದಕ್ಕೂ ಎಷ್ಟೋಜನ ಸಾಧು-ಸಂತರು, ಸತ್ಪುರುಷರು, ವೈಚಾರಿಕರು, ವಿಜ್ಞಾನಿಗಳು ಮುಂತಾದ ಮಹಾನ್ ವ್ಯಕ್ತಿಗಳು ಹುಟ್ಟಿದ್ದಾರೆ, ಬದುಕಿದ್ದಾರೆ. ಸತ್ತು ಹೋಗಿದ್ದಾರೆ. ಈ ಜಗದಲ್ಲಿ, ಈ ಜೀವನದಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಅವೆಲ್ಲ ಇದ್ದಂತೆಯೆ ಇವೆ. ಹಾಗಾದರೆ ಇವರೆಲ್ಲ ಏಕೆ ಹುಟ್ಟಿದರು? ಏಕೆ ಬದುಕಿದರು? ಏಕೆ ಸತ್ತರು? ಸೃಷ್ಟಿ ಸ್ಥಿತಿಲಯಗಳು ನಿಸರ್ಗದ ಉಪಕ್ರಮಗಳೆಂದು ತೃಪ್ತರಾಗಬೇಕಾದರೆ ಈ ಉಪಕ್ರಮಗಳೇಕೆಂಬ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಅದುವೇ ಕಾರಣ ಇದೊಂದು ಅದ್ಭುತ ಮತ್ತು ರಹಸ್ಯ.

ವಿಶ್ವಮಾನವನಿಗೆ ಎಷ್ಟು ಅದ್ಭುತವೋ ಅಷ್ಟೇ ಅದ್ಭುತ ಈ ಮಾನವನ ಸೃಷ್ಟಿ. ಮಾನವ ಅದ್ಭುತ ವಿಶ್ವದ ಚಿಕ್ಕರೂಪ ಅಲ್ಲದೆ. ವಿಶ್ವವೇ ರಹಸ್ಯಮಯ ಮಾನವನ ವಿಸ್ತೃತ ರೂಪ. ಇಂಥ ರಹಸ್ಯಮಯ ಅದ್ಭುತಗಳ ಸರಮಾಲೆಯನ್ನೇ ಪ್ರಶಂಸಿ ಭೂಸನೂರುಮಠ ವಿರಚಿತ "ಭವ್ಯಮಾನವ" ಮಹಾಕಾವ್ಯವು ಚಿತ್ರಿಸುತ್ತದೆ. ಮಾನವ ಸರ್ವಶ್ರೇಷ್ಠತೆಯನ್ನು, ಬಹುಶಃ ಬೇರಾವ ಕೃತಿಯಲ್ಲಿಯೂ ನಾವು ಕಾಣಲಾರೆವು.

ವಿಶ್ವದ ಎರಡು ಶಕ್ತಿಗಳಾದ ಅರಿವು-ಮರವೆಯ ಸಮತೋಲವು ಅವನಲ್ಲಿ ಸರಿಬೆರೆತಿದೆ. ಅಂತೆಯೆ ಅವನು ಅರಿವು ಮರವೆಯ ಮುದ್ದೆ ಚಿತ್ರವಾಮನ ಮೂರ್ತಿ, ಅದುವೇ ಕಾರಣ ಮಾನವನು ವಿಶ್ವದ ವಿಚಿತ್ರ. ಘನ ಘೋರ ಅದ್ಭುತವೆಂದು ಕಾವ್ಯವು ಸಾರಿದೆ. ನೋಡಯ್ಯ ಮಣ್ಣೊಳಗೆ ಚೋಟು ಮೂರುತಿ ಎದ್ದು ಏನು ಅದ್ಭುತಗಳನು ನಡೆಸಿರುವ ಮಾನವ ನೋಡು". ಎಂದು ಬೆಚ್ಚಿ ಬೀಳುವಂತೆ "ಭವ್ಯ ಮಾನವ" ಮಾಡುವದು.

ಮಾನವನು ಹುಟ್ಟಿರದಿದ್ದರೆ ........? ಅದೂ ಒಂದು ರಹಸ್ಯವೇಸರಿ. ಅವನು ಈಗ ಹುಟ್ಟಿ ಆಗಿದೆ. ಅವನ ಹುಟ್ಟು ವಿಶ್ವದ ಅದ್ಭುತ ಶಕ್ತಿಯ ನಿದರ್ಶನ. ತದನಂತರ ವಿಶ್ವಚೇತನವನ್ನು ಅವನೇ ಹಾರಿ ಬಿಡುತ್ತಿರುವಂತೆ ತೋರುತ್ತದೆ. "ಜಗದ ಬಾಗಿಲು ತೆರೆದು ಜಗದ ಮನೆಯೊಳಗಿರ್ದು ನಾಟಕವ ನಡೆಸಿಹನು ನಾನು ಮಾನವ ಬ್ರಹ್ಮ"

ಎಂಬ ಮಾತಂತೂ ಅವನನ್ನು ಅತ್ಯುನ್ನತ ಶಿಖರಕ್ಕೆ ಒಯ್ಯುವದು. ಏನಾದರೂ ಎಲ್ಲವೂತಾನೆ. ಎಲ್ಲವೂತನ್ನಿಂದ!

"ಸತ್ತು ಹೆಣನಾದರೂ ವಾರ್ತೆ ಕೀರ್ತಿಯ ಸ್ವಪ್ನ
ಮಣ್ಣಾಗಿ ಹೋದರೂ ಪುಣ್ಯ ಸ್ವರ್ಗದವಾಸ
ಪಾಪವನು ಬಿತ್ತಿ ಪುಣ್ಯವ ಬೆಳೆವೆನೆಂಬಿ
ರಾಗದ್ವೇಷದ ಉರಿಗೆ ಎಣ್ಣೆಯಾಗುತೆ ತಾನೆ
ಲೋಕದುದ್ಧಾರ ತನ್ನುದ್ಧಾರವದೆ ಎಂಬ
ಹಮ್ಮದೆ ಬೆಳಗುತ್ತೆ ಭಕ್ತಿಯನು ಕತ್ತಲಿಸಿ
ಅದೆ ಧರ್ಮ ಅದೆ ಮೋಕ್ಷ ಅದೆ ತಾನು ಎಂಬ
ಈ ಮಾನುಷಾದ್ಭುತವು ಏನೆಂಥ ಚಿತ್ರ."

ಭಾರಿ ಕತೆಯ ತುತ್ತತುದಗೇರಿ ಆಧ್ಯಾತ್ಮಿಕತೆಯನ್ನು ಅಲುಗಿಸುವ ಭರದಲ್ಲಿ ತನ್ನನ್ನು ತಾನೇ ಬಲಿಕೊಡುವ ಸನ್ನಾಹ ಎಂದು ತೋರುತ್ತಲಿದೆ. ಇದೆಲ್ಲವೂ ಆ ಪ್ರಕೃತಿಯ ಅದ್ಭುತವೆಂದು ಕೊಂಡರೆ "ಭವ್ಯಮಾನವ"ದ ಕರ್ತಾರರು "ನೆಲದೊಳಗೆ ಮೂಡಿಸಿದೆ ಪ್ರಾಣಿ ಮಾನವನ. ನಿನ್ನ ಅದ್ಭುತಗಳಿಗೆ ಕಲಶವಿಟ್ಟೆ ಎಂದು ನಿಸರ್ಗದ ದಿವ್ಯ ಶಕ್ತಿಗೆ ಮಾರು ಹೋಗುತ್ತಾರೆ.

ದಿವ್ಯ ಶಕ್ತಿಯನ್ನು ಆವಿಷ್ಕರಿಸಿಕೊಂಡ ಮಾನವ ಅರಿವುಳ್ಳ ಪ್ರಾಣಿಯೆಂದು ದೃಢಪಡುತ್ತ ಸಾಗಿರುವಾಗ ಸ್ವಯಂನಾಶದತ್ತ ದಿಟ್ಟ ಹೆಜ್ಜೆ ಹಾಕುತ್ತಿರುವದೂ ಅನುಭವ ವೇದ್ಯವಾಗುತ್ತಲಿದೆ.

"ಇದ್ದ ಸ್ವರ್ಗವ ಹರಗಿ ನರಲೋಕವ ಬಿತ್ತಿ
ಅರಿವಿನೀಪ್ರಾಣಿ ............... ಅರಿವಿನೀಪ್ರಾಣಿ
ತಲೆಯೊಳಗೆ ಬುದ್ಧಿ ಎದೆಯೊಳಗೆ ಭಾವ
ಕಣ್ಣೊಳಗೆ ಕಾಣಿಕೆ ಕವಿಯೊಳಗೆ ಕೇಳಿಕೆ
ಕೈಯೊಳಗೆ ಮಾಟ ಕಾಲೊಳಗೆ ಹರಿದಾಟ
ಜಗದೊಳಗೆ ಅದ್ಭುತ ಮಹಾದ್ಭುತ ಪ್ರಾಣಿ"

ವೈಜ್ಞಾನಿಕ ಪ್ರಗತಿ ಸಾಧನೆಗಳ ಮೂಲಕ ದಾಪುಗಾಲಿಡುತ್ತ ಸಾಗಿರುವ ಮಾನವನ ಯತಾರ್ಥ ಚಿತ್ರೀಕರಣವಿದು.

ಈ ಚಿತ್ರಕ್ಕೆ ಹಿನ್ನೆಲೆಯಾಗಿರುವ ವಿಸ್ತಾರ ಬಯಲಿನಲ್ಲಿ ರೂಪುಗೊಂಡ ಇನ್ನೊಂದು ಚಿತ್ರವೂ ಮನಸಾಕರ್ಷಕ.

"ಎಂಟು ದಿಕ್ಕುಗಳೆಂಟು ಮನೆಯ ಕಂಬಗಳು
ಎದೆಯಾಟ ಕೊಂದಿನಿಸು ಅಡ್ಡಗೋಡೆಗಳಿಲ್ಲ

ಹರಿದಂತೆ ಹರಿದಾಚೆ ಸರಿವ ಗೋಡೆಗಳು
ಮಾಳಿಗೆಯನೇರುವರೆ ನಿಚ್ಚಣಿಕೆ ಮನಕಿಲ್ಲ
ಗಗನದಾ ಚಪ್ಪರವ ಕಂಡ ಮಾನವರಿಲ್ಲ;
ಮೇಘ ಪಂಕ್ತಿಯೆ ಚಿತ್ರವರ್ಣದಾ ಮೇಲ್ಕಟ್ಟು
ಮನೆಗೆ ತೋರಣವಾದು ದೇವೇಂದ್ರ ಚಾಪ;
ಕೋಟಿ ದೀಪದ ಮಾಲೆ ಹಾಡುತ್ತ ಹರಿದಿಹವು
ಹಗಲು ಕತ್ತಲೆಯಿಲ್ಲ ಮಲ್ಲನ ಮಹಾಮನೆ
ಭೂಮಿಯೇ ತೂಗು ಮಹಾಮಂಚ ಚೆನ್ನಂಗೆ
ತರುಮರಿಾದಿಗಳೆಲ್ಲ ಹೂದಳಿರ ಹಾಸಿಗೆ
ಸುಳಿದು ಬೀಸುವ ಗಾಳಿ ಬೀಸಿರುವ ಬಿಜ್ಜಂಗೆ"

ಇಂಥ ರಮ್ಯವಾದ ಅಗಾಧ ಹಿನ್ನೆಲೆಯನ್ನು ಇರಿಸಿಕೊಂಡ ಮಾನವನು ಹೊಯ್ದಾಟ, ಏರು-ಪೇರು, ಒಳಿತು-ಕೇಡು ಮುಂತಾದವುಗಳ ಉಯ್ಯಾಲೆಯಲ್ಲಿ ಸಂತತವಾಗಿ ತೂಗಾಡುತ್ತಿದ್ದಾನೆ. ಈ ಹೊಯ್ದಾಟಕ್ಕೆ ಅವನಲ್ಲಿ ಬೇರುಬಿಟ್ಟಿರುವ "ನಾನು" ಎಂಬುದು. ಅಂತೆಯೇ ಮಾನವ 'ನಾನಿನ್ನ' ಪ್ರಾಣಿಯೆಂದು ಭವ್ಯಮಾನವದ ಪುಟ-ಪುಟಗಳಲ್ಲಿ ಬಿತ್ತರಿಸಲಾಗಿದೆ. ನಾನು ಎಂಬುದು ಅವನ ಪ್ರಗತಿ-ಸಾಧನೆಗಳಿಗೆ ಎಷ್ಟು ಹೊಣೆಗಾರವೊ, ಅಷ್ಟೇ ಅವನನ್ನು ವಿನಾಶದ ಅಂಚಿಗೆ ತಂದು ನಿಲ್ಲಿಸಲೂ ಹೊಣೆಗಾರ. ಇದು ಅವನನ್ನು ನಿಸರ್ಗದ ನಿಯಮ, ನಿಸರ್ಗ ನಿಯತ್ರಣಗಳನ್ನೆಲ್ಲ ಮೀರಿ ನಿಲ್ಲುವ ಹವಣಿನತ್ತ ಯಶಸ್ವಿಯಾಗಿ ಕರೆದೊಯ್ದಿದೆ.

"ವಿದ್ಯೆಶಾಸ್ತ್ರವ ಕಟ್ಟಿ ದಾನಧರ್ಮವ ಹೂಡಿ
ಯಜ್ಞಯಾಗವ ಬಿತ್ತಿ ಸರ್ಗ ವೈಕುಂಠಗಳ
ಬೆಳೆಯ ಬಯಸಿಹನಿವನು ನಿನ್ನಮೀರಿ."

ಇದು ಮಾನವ ಹವಣಿನ ಸಂಕ್ಷಿಪ್ತ ಚಿತ್ರ, "ನಾನಿಸುವಿಕೆ"ಯ ಅಧಿಕ ವಿವರಣೆಯನ್ನು ಕೆಳಗಿನ ಸಾಲುಗಳು ತೋರ್ಪಡಿಸುತ್ತವೆ.

"ನಾನು ಮಾನವ ನಟಿಸಿತ್ತು ನಾಟಕ
ಎಲ್ಲಿ ನೋಡಿದರಲ್ಲಿ ನಾನಿನ ವಿಲಾಸ
ಎಲ್ಲಿ ಕೇಳಿದರಲ್ಲಿ ನಾನು ನಾನಿನ ಮಾತು
ಎಲ್ಲಿ ಸೋಂಕಿದರಲ್ಲಿ ನಾನುಗಳ ವಾಸನೆ
ನಾನುಗಳ ರಸವಿರಸ ನಾಟಕದ ನೆಯ್ಗಿ."

ಮಾನವ "ನಾನು" ಬ್ರಹ್ಮಸ್ವರೂಪಿ; ಸರ್ವಜ್ಞ. ಆದರೂ ಸೀಮಿತತೆಯೇಕೆಂಬ ಬಿಡಿಸಲಾಗದ ಒಗಟು.

"ನನ್ನ ನಾನೇ ನನಗೆ ಮೃತ್ಯುವಾದರೆ ಮತ್ತೆ
ಇನ್ನಾರ ದೂರುವೆ? ಬಿನ್ನಾಣವುಂಟೆ."
"ಜೀವಕಳೆ ದಿವ್ಯಕಳೆ ಒಳಗೆ ಮಾನವನ?
ಆ ಕಳೆಯ ಕತ್ತಲಿಸಿ ಉರಿಯುತಿರುವೀ ನಾನು
ಮಾನವನ ಮಹಿಮೆ ವಿಪರೀತ ವಿಪರೀತ !

ಈ ನಾಡಿನ ಮಾನವ ತನಗೆ ತಾನೇ ಮೃತ್ಯುವಾಗಿ ಮಾನವತೆಗೇಸವಾಲಾಗಿ ನಿಂತಿದ್ದಾನೆ; ರುದ್ರಭೀಕರ ನಾಟಕವಾಡುತ್ತಿದ್ದಾನೆ.

ಮಾನವ ಸೃಷ್ಟಿ ಹಾಗೂ ಮಾನವ ಶ್ರೇಷ್ಠತೆಯ ಅರಿವು ಮೂಡಿದರೆ ಅವನು ಅಸಹಾಯಕತೆಯ ಅಪೂರ್ವ ಪ್ರಾಣಿಯೆಂಬುದೂ ಖಚಿತ ಪಡುತ್ತದೆ. ನಿಷ್ಕಾರಣ ವಾಗಿ ಅವನು ಹುಟ್ಟುತ್ತಾನೆ. ಗೊತ್ತು ಗುರಿಯಿಲ್ಲದೆ ಉಡುಕುತ್ತಾನೆ. ಕಾರಣವಿಲ್ಲದೆ ಸಾಯುತ್ತಾನೆ. ಸತ್ತವರಿಗಾಗಿ ಕಾರಣವನ್ನು ಶೋಧಿಸತೊಡಗುತ್ತಾನೆ. ಸಾವಿನ ನಂತರದ ಗುರಿಯೂ ತರ್ಕವನ್ನು ಮೀರಿದುದು. ಹುಟ್ಟು-ಸಾವುಗಳೆರಡೂ ಮಾನವ ಅಳವನ್ನು ವೈಚಾರಿಕವಾಗಿ, ಭಾವನಾತ್ಮಕವಾಗಿ ದಾಟಿ ಹೋಗುತ್ತವೆ. ಈ ನಿಟ್ಟಿ ನಲ್ಲಿಯೇ ನಿಶ್ಚಿತ ನಿಲುವನ್ನು ತಳೆಯಲು, ತನಗೆ ತಾನೇ ಸ್ಪಷ್ಟ ತಿಳಿವಳಿಕೆಯನ್ನು ಮಾಡಿಸಿಕೊಳ್ಳಲು ಮಾನವ ಕುಲವು ತನ್ನನ್ನೇ ಪಣಕ್ಕೆ ಹಚ್ಚಿ ನಿಂತುಕೊಂಡರೂ ರಹಸ್ಯದಲ್ಲಿಯೇ ಪರ್ಯವಸಾನಗೊಳ್ಳುತ್ತಲಿದೆ.

ಮೇಲಿನ ಹಂತವನ್ನು ಹೊಂದಿದವರು, ಮಾನವ ಸ್ಥಳವನ್ನೂ ಮೀರಿದವರು, ಜ್ಞಾನೋದಯವಾದವರು, ಮಾನಸಿಕವಾಗಿ ಸಂತೃಪ್ತಿಯನ್ನು ಪಡೆದವರೆಂದು ತಿಳಿದರೆ, ಆ ತಿಳಿವಳಿಕೆಯು ಸಂಪೂರ್ಣವಾಗಿ ವೈಯಕ್ತಿಕವಾದುದೆಂದೂ ಅದು ಸಾರ್ವತ್ರೀ-ಕರಣಗೊಳ್ಳುವದು ಅಸಾಧ್ಯವೆಂದೂ ಗಂಭೀರ ಪರ್ಯಾಲೋಚನೆಯುಳ್ಳ ತತ್ವಜ್ಞಾನ ಗಳೆಲ್ಲ ಸಾರುತ್ತವೆ; ದಿಗ್‌ಭ್ರಮ ಉಂಟುಮಾಡುತ್ತವೆ. ಅಂತೂ ಇದು ರಹಸ್ಯಮಯ ಆಹ್ವಾನವೇ ಆಗುತ್ತವೆ. ಯಾವ ಆಧ್ಯಾತ್ಮಿಕತೆಯೂ ಸಾರ್ವಕಾಲಿಕ ಪರಿಹಾರವಾಗು ವದಿಲ್ಲ. ಮತ್ತೆ ಅದು ವ್ಯಕ್ತಿಗತ ನಂಬುಗೆಯತ್ತ ಕೈಚಾಚುತ್ತದೆ.

ಭವ್ಯಮಾನವದಲ್ಲಿಯ ಗಿರಿಮಲ್ಲನ ಪಾತ್ರವು ಈ ದೃಷ್ಟಿಕೋನವನ್ನು ಈ ನಿಲುವನ್ನು ತೀರ ಪರಿಣಾಮಕಾರಿಯಾಗಿ ಬಿಂಬಿಸುತ್ತದೆ. ಆದರೂ ಮಾನವ ಹೋರಾಟಕ್ಕೆ ಕೊನೆಯಿಲ್ಲ ದೇವರ ವಿರುದ್ಧವಾಗಿ ಮಾನವ ಹೋರಾಟವು ಸಾಗಿಯೇ ಇದೆ. "ಕೊಲುವೆನೆಂಬಾ ಭಾಷೆ ದೇವನದು, ಗೆಲುವೆನೆಂಬಾ ಭಾಷೆ ಭಕ್ತನದು. ನಿಸರ್ಗ, ಪ್ರಕೃತಿ, ದೇವರು ಒಳಿತು ಕೇಡಿನ ಸಂಗಮದ ಸಮತೋಲನೆ ಸರಿ. ಅದುವೇ ಕಾರಣ ಮಾನವನ ರಚನೆಯೂ ಎರಡರ ರಸಘಟ್ಟ. ಈ ಎರಡರ ಅಸ್ತಿತ್ವ, ಪರಿಣಾ ಮಗಳೂ ಮಾನವ ಅನಿಸಿಕೆಗಳಿಗೆ ಒಳಪಟ್ಟಿವೆ. ಇದನ್ನು ಕುರಿತ ವಿಚಾರದ ಪ್ರಗಲ್ಭ ತೆಯನ್ನು ಗಿರಿಮಲ್ಲನ ಪಾತ್ರವು ತೋರ್ಪಡಿಸುವದು.

ಒಳಿತೇ ಕೆನೆಗಟ್ಟಿ ನಿಂತ ಕಲ್ಯಾಣವು ಉತ್ತುಂಗ ಮಾನವ ಶ್ರೇಷ್ಠತೆಯನ್ನು ಪಡೆದಿದ್ದರೂ ತಾನೇ ತಾನಾಗಿ ಕೆಳಗೆ ಬಿದ್ದವರ, ಆರ್ತನಾದದ ಪರಿಮಾರ್ಜನೆಯನ್ನು ನೀಡಲು ಸಾಧ್ಯವಿಲ್ಲವೆಂಬ ಪ್ರತಿಪಾದನೆಯು ವಾಸ್ತವ ಕಠೋರ ಸತ್ಯವಾಗಿ ಬಿಂಬಿತವಾಗುತ್ತದೆ. ಗಿರಿಮಲ್ಲನು ಗುರುವಿಗೆ ಕೇಳುವ ಪ್ರಶ್ನೆ ಅದೊಂದು ಕೋಟಿ ಪ್ರಶ್ನೆ.

ಅಂತಿರಲಿ ಗುರುಚಂದೆ
'ನಿನ್ನವರ' ಸಂತತಿ 'ಕಲ್ಯಾಣಗರೆಯಲಿ
ತಮ್ಮೆಡೆಗೆ ಬಂದವರನುದ್ಧಾರಗೈಯಲಿ
ಆದರೆ ತಂದೇ ———— ಆದರೆ ಎನ್ನಯ್ಯ
ಸಂಸಾರದೊಳು ಸಿಕ್ಕು ಒದ್ದಾಡುತಿರುವೆ
ನೆಲದವರ ಗತಿಯೇನು ಮತಿಯೇನಯ್ಯಾ?
ಉಳ್ಳವರು ಹಗೆಯವನು ತಿನೆವನ್ನಬರ ತಂದೆ
ಪಾರಿಹೋಯಿತು ಹರಣ ಬಡಬಗ್ಗರಾ!
ಜಗದೊಳಗೆ ವಿಸ್ತಾರವಾಗಿರಲಿ ನಿಮ್ಮ ಗಣ
ತಮ್ಮ ಜಗದೊಳು ತಾವು ಕಲ್ಯಾಣವಾಗಿರಲಿ
ನೋಡಿಲ್ಲಿ ತಂದೆ, ಏನೆಂಥ ವಿಪರೀತ
ನೆಲದವರ ಕಷ್ಟನಷ್ಟದ ದುಃಖ ಸಾಗರದ
ಅರಿವುಂಟೆ ಎಲೆ ಅಯ್ಯ ನಿಮ್ಮ ಗಣಸಂತತಿಗೆ?
ಊರೊಳಗೆ ಗುಡಿಲಲ್ಲಿ ಅಡವಿಯೊಳು ಹೊಲನಿಲ್ಲ
ಹಸಿದ ಹೊಟ್ಟೆಗೆ ಬೇಡಿ ಬೆನ್ನೊಳಗೆ ಬಾಸುಳ
ಹೆಂಡತಿ ಮಕ್ಕಳು ಹೊರಲಾಡುತಿಹವಿಲ್ಲಿ
ಕಲ್ಯಾಣವಿವರ ಮುಟ್ಟುವದೆಂದು ತಂದೆ?
ಮತ್ತೆ ತಂದೇ ಜಗದ ಕಾರುಣ್ಯವಾರಾಶಿ
ಈ ಊರು ಆ ಊರು ಇಲ್ಲಿ ಈ ಗುಡಿಸಿಲು
ಅಲ್ಲಿ ಆ ಮನೆ ಆಚೆ ಆ ಕಡೆಯ ಮನೆಯೊಳಗೆ
ರೋಗ ರುಜಿನದ ಪೀಡೆ ಪಿಡುಗಿಗೊಳಗಾಗಿ
ನರಳುತಿವೆ ಹೊರಳುತಿವೆ ಆ ಕೂಸು ಈ ಮುಪ್ಪು
ಯೌವನದ ಮಾತಿಲ್ಲ ಹೆಣ್ಣುಗಂಡೆಂದಿಲ್ಲ
ಜಡ್ಡು ಬೇನೆಯು ಹೊಡೆತ ಮಿತಿ ಮೀರಿ ಸಂಕಟ!
ಬಂದಿಲ್ಲಿ ನೆಲಕಿಳಿದು ಕಂದೆರೆದು ನೋಡಿದರೆ
ದೇವರಿಗೆ ದೇವರೇ ಅತ್ತುಬಿಡಬಹುದಯ್ಯಾ
ಎಂದು ಬರುವದು ನಿಮ್ಮ ಕಲ್ಯಾಣವಿಲ್ಲಿಗೆ?
ಮತ್ತೆ ನೋಡೆನ್ನಯ್ಯ;
ಊರು ಊರೆನಲಿಲ್ಲ ನಾಡು ನಾಡೆನಲಿಲ್ಲ

ಆ ಮನೆಯ ಈ ಮನೆಯ ಅವರಿವರನೆನಲಿಲ್ಲ
ವಿದ್ಯೆ ಬುದ್ಧಿಯ ಸೊಂಕು ಲೆಕ್ಕ ಪಾಕಿಯ ಗುರುತು
ಹತ್ತಿಲ್ಲ ಈ ಅಸಂಖ್ಯಾಳ ಕೋಟಿಗೆ.
ಸಾವನ್ನಬರ ಜಡ್ಡು ಅಜ್ಞಾನರೋಗ
ಮಾನವಸ್ಥಲದ ಕೆಳಗಿರುವ ಕತ್ತಲೆಯೊಳಗೆ
ಒದ್ದಾಡುತಿಹವಯ್ಯಾ ಪಶು ಕಲ್ಪ ಪ್ರಾಣಿಗಳು!
ನಿಮ್ಮ ಕಲ್ಯಾಣಕೀ ಗವಿಲೋಕ ಹೊರತೆ?
ನೀವು ಬೆಟ್ಟದ ಮೇಲೆ, ಗರ್ತಗಹ್ವರ ದಿವರು
ನಿಚ್ಚಣಿಕೆಯಿಲ್ಲವೇ ಇಳಿದು ಹತ್ತಲಿಕೆ?
ಮತ್ತಿವರು ಈ ಕಡೆ
ಕಾಮ ಕ್ರೋಧಕೆ ಸತ್ತು ದ್ವೇಷ ವೈರಕೆ ಮಡಿದು
ಹಾಳಾಗಿ ಕತ್ತಲೆಯ ಕೂಡಿ ಹೋಗಿಹರು
ಇವರಿಗರ್ಥವೆ ಇಲ್ಲವೇನಯ್ಯ ಗುರುದೇವ?
ಏಕೆ ಹುಟ್ಟಿದರಿವರು ಸತ್ತರೇಕೆ?
ಸಕಲ ಜೀವಾತ್ಮರಿಗೆ ಕಲ್ಯಾಣ ಬಯಸುವರು
ಕಂದೆರೆದು ನೆಲದವರ ನೋಡಲಾಗದೆ ತಂದೆ?
ಸೋಂಕಿದರೆ ಹೀನಗಳ ಬಂದಿತ್ತೆ ಸೂತಕ?
ಯಾರು ಬಲ್ಲರು ತಂದೇ ನೀವೇ ಬಲ್ಲಿರಿ ಗುರುವೆ
ನಿಮ್ಮ ಕಲ್ಯಾಣ ಸಾಮ್ರಾಜ್ಯ ವೈಭವವ!
ಇಲ್ಲಿ ಬಿಟ್ಟಿತು ಬಿರುಕು ಒಡಕು ಒಡಮೂಡಿತ್ತು
ಎತ್ತರದ ನಿಮ್ಮವರು ಕಲ್ಯಾಣದೊಳಗಿರಲಿ
ನಮ್ಮ ಕೋಟಿಯ ಪಾಡು ನಮಗಿರಲಿ ತಂದೆ

ಮಾನವ ಸ್ಥಲಕ್ಕಿಂತ ಮೇಲ್ಮಟ್ಟಕ್ಕೆ ಏರಿದವರೆಂದು ತಿಳಿದುಕೊಂಡವರು ಮಾನವ ಕುಲದ ಭಾವ-ಬುದ್ಧಿಗಳ ಕುಲುಮೆಯಲ್ಲಿ ಬೆಂದವರೆದುರು ಮೇಲಿನ ಸುದೀರ್ಘ ಸಾಲುಗಳು ಆಹ್ವಾನ. ಕೊನೆಯಿಲ್ಲದ ಬಗೆಹರಿಯದ ಈ ಪ್ರಶ್ನೆಗಳ ಮುಖಾಂತರ ಸಮಗ್ರ ಮಾನವ ಕುಲವನ್ನೇ ಕೆಣಕಿದಂತಾಗಿದೆ. ಯಾವ ಧರ್ಮ, ಯಾವ ವಿಜ್ಞಾನ, ಯಾವ ಆಧ್ಯಾತ್ಮ, ಯಾವ ರಹಸ್ಯ ಶಾಸ್ತ್ರವು ಪರಿಹಾರವನ್ನು ಒದಗಿಸಬಲ್ಲದು? ಪರಿಹಾರವು ದೊರೆತಂತೆ ಭಾಸವಾಗಬಹುದಲ್ಲದೆ ಅಪೂರ್ಣತೆಯು ಉಳಿದೇ ತೀರುವದು.

ಇದೊಂದು ಅಪೂರ್ವ ಮಹಾಕಾವ್ಯ. ಚಿರಂತನ ಚಿಂತನಕ್ಕೀಡು ಮಾಡುವ ಮಹಾಕಾವ್ಯ.

---

ಅಣ್ಣಪ್ಪ ಮಟ್ಟೀಕಲ್ಲಿ, ನಂ. 4012 (ಬಿ) ಗಣಾಚಾರ ಬೀದಿ, ಬೆಳಗಾವಿ-590002.

# -: ವಚನ ಸಾಹಿತ್ಯ ಘಟ್ಟಗಳು: ಒಂದು ವಿವೇಚನೆ :-

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕಿರುವ ಮಹತ್ವ ಅದ್ವಿತೀಯವಾದುದು ವಚನ ಸಾಹಿತ್ಯವೆಂದರೆ ಕನ್ನಡ ಸಾಹಿತ್ಯ, ಕನ್ನಡಸಾಹಿತ್ಯವೆಂದರೆ ವಚನ ಸಾಹಿತ್ಯ ಎನ್ನುವಷ್ಟರ ಮಟ್ಟಿಗೆ ಇವೆರಡೂ ಅವಿನಾಭಾವಿಯೂಗಿವೆ. ವಚನ ಒಂದು ಸಾಹಿತ್ಯ ಪ್ರಕಾರವಾಗಿ ಇಂದೂ ಪಂಡಿತರನ್ನು, ಪಾಮರರನ್ನು ಆಕರ್ಷಿಸುತ್ತಿದೆ. ೧೨ ನೇ ಶತಮಾನದಲ್ಲಿ ಸಾಮಾನ್ಯಜನರಿಗೆ ಸುಲಭವಾಗಿ ತಿಳಿಯುವ ಹಾಗೆ ಅನೇಕ ಶರಣ-ಶರಣೆಯರು ವಚನಗಳನ್ನು ರಚಿಸಿದರು. ಬಸವಣ್ಣನವರ ಸಮರ್ಥ ಮುಂದಾಳು ತನದಲ್ಲಿ ಅಂದು ಜಾತಿ-ಮತಗಳೆನ್ನದೆ, ಸ್ತ್ರೀ-ಪುರುಷ ಭೇದವನ್ನೆಣಿಸದೆ ಅನೇಕ ಶಿವಭಕ್ತರು ಒಂದೆಡೆ ಸೇರಿ ತಾವು ಕಂಡುಂಡ ಅನುಭವಿಸಿದ ಅನುಭವಗಳನ್ನು ತಾವಾಡುವ ನಿತ್ಯದ ಭಾಷೆಯಲ್ಲಿ ಅಭಿವ್ಯಕ್ತಿಸಿದರು. ಇವೇ ವಚನಗಳಾದವು. ಇದರಿಂದ ಕನ್ನಡ ಸಾಹಿತ್ಯಕ್ಕೆ ಒಂದು ವಿನೂತನ ಆಯಾಮ ಪ್ರಾಪ್ತವಾಗಿ, ಅದು ನವೀನ ಪಥದಲ್ಲಿ ಮುನ್ನಡೆಯುವಂತಾಯಿತು. ಬಸವಾದಿ ಶರಣರು ತಮ್ಮ ವಚನಗಳಲ್ಲಿ ಅಂದು ಬಳಸಿದ ಭಾಷೆ ಜನಸಾಮನ್ಯರಿಗೂ ಸುಲಭವಾಗಿ ಅರ್ಥವಾಗುವಂಥದು. ಅವರಲ್ಲಿ ಅನೇಕರು ವೇದ ಉಪನಿಷತ್ತುಗಳನ್ನು ಓದಿ ಅರ್ಥ ಮಾಡಿಕೊಂಡವರಿದ್ದರು ಅವರು ಸಂಸ್ಕೃತದಲ್ಲಿ ವಚನಗಳನ್ನು ಬರೆಯಲಿಲ್ಲ. ಜನತೆಗೆ ತಿಳಿಯುವ ಭಾಷೆಯಲ್ಲಿ ವಚನ ರಚಿಸಿ ಸಾಹಿತ್ಯವನ್ನು ಸಾರ್ವತ್ರಿಕಗೊಳಿಸಿದರೂ ಇವರಿಗಿಂತ ಮೊದಲಿದ್ದ ಜೈನ ಕವಿಗಳು ರಾಜಾಶ್ರಯದಲ್ಲಿದ್ದುಕೊಂಡೂ ಪ್ರೌಢ, ಸಂಸ್ಕೃತ ಭೂಯಿಷ್ಠ ಭಾಷೆಯಲ್ಲಿ ಕಾವ್ಯಬರೆದು ತಾವಷ್ಟೇ ಓದಿ ಸಂತೋಷಪಡುತ್ತಿದ್ದರು. ಮತ್ತು ರಾಜರೆದುರು ಓದಿ ಅವರ ಪ್ರೀತಿಗೆ ಪಾತ್ರರಾಗುತ್ತಿದ್ದರು. ಆದರೆ ವಚನಕಾರರು ಇದನ್ನು ತಪ್ಪಿಸಿ ಸಾಹಿತ್ಯವನ್ನು ಶ್ರೀ ಸಾಮಾನ್ಯನ ಮನೆ ಬಾಗಿಲಿನವರೆಗೂ ಒಯ್ದರು. ಯುಗ ಯುಗಗಳಿಂದ ತುಳಿತಕ್ಕೆ ಒಳಗಾದ, ಸಾಹಿತ್ಯದಿಂದ ದೂರವಿದ್ದ ಅನೇಕ ವ್ಯಕ್ತಿಗಳು ಅಂದು ಸಾಹಿತ್ಯದ ಸಂಪರ್ಕಕ್ಕೆ ಬಂದುದಲ್ಲದೆ, ತಮ್ಮ ನೋವು-ನಲಿವು ಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಸಿದ್ದು ಅತ್ಯಂತ ಮಹತ್ವದ್ದಾಗಿದೆ. ಅಂದಿನ ಸಮಾಜದ ರೀತಿ-ನೀತಿಗಳಿಗೆ ತಮ್ಮ ವಚನಗಳ ಮೂಲಕ ಸ್ಪಂದಿಸುತ್ತ ಇವರು ತಮ್ಮ ಪ್ರಗತಿಪರವಾದ ವಿಚಾರಗಳನ್ನು ಸಮಾಜದಲ್ಲಿ ಸಂವಹನಗೊಳಿಸಲು ಯತ್ನಿಸಿದರು. ಅಂದು ರಚನೆಗೊಂಡ ವಚನಗಳ ಧ್ಯೇಯ ವರ್ಣ ಭೇದ, ಜಾತಿ ಭೇದ, ಸ್ತ್ರೀ-ಪುರುಷ ಭೇದ ಅಜ್ಞಾನ ಮೂಢನಂಬುಗೆಗಳನ್ನು ಕೀತ್ತು ಹಾಕುವುದೇ ಆಗಿತ್ತು. ಬಸವಾದಿ ಶರಣರು ಈ ಧ್ಯೇಯ ಸಾಧನೆಗಾಗಿ ಅವಿರತ ಶ್ರಮಿಸಿದರು. ಜೊತೆಗೆ ಅವರು ವೀರಶೈವ ಧರ್ಮದ ತತ್ವಗಳಾದ ಅಷ್ಟಾವರಣ, ಷಟ್‌ಸ್ಥಲ, ಹಾಗೂ ಪಂಚಾಚಾರಗಳ ಮಹತ್ವವನ್ನು ಜನತೆಗೆ ತಿಳಿಸಲೆತ್ನಿಸಿದುದನ್ನೂ ಅರಿಯುವೆವು. ವಚನ ಸಾಹಿತ್ಯ

ವೆಂದರೆ ಕೇವಲ ವೀರಶೈವ ಧರ್ಮದ ತತ್ವಗಳನ್ನು ಒಳಗೊಂಡಂಥದೆಂಬ ಭಾವನೆ ಕೆಲವರಲ್ಲಿ ಇತ್ತು. ಆದರೆ ಇಂದು ವಚನ ಸಾಹಿತ್ಯದ ಆಳವಾದ ಅಧ್ಯಯನ ನಡೆದು ದರಿಂದ ಈ ಅಭಿಪ್ರಾಯದಲ್ಲಿ ಹುರುಳಿಲ್ಲವೆಂಬುದು ಎಲ್ಲರಿಗೂ ಮನವರಿಕೆಯಾಗಿದೆ, ಅಷ್ಟೇ ಅಲ್ಲ ಎಲ್ಲರಿಗೂ ಸುಲಭವಾಗಿ ತಿಳಿಯುವ ಈ ವಚನಗಳನ್ನು ಇಂದು ಜನಪದ ವಿಜ್ಞಾನದ ಹಾಗೂ ಮನೋವಿಜ್ಞಾನಗಳಂತ ಅನ್ಯಜ್ಞಾನಗಳ ಬೆಳಕಿನಲ್ಲೂ ಅಧ್ಯಯನ ಮಾಡುವುದು ಎಂದಿಗಿಂತಲೂ ಇಂದು ಅವಶ್ಯವಿದೆ. ಅವು ಒಳಗೊಂಡ ಜೀವನ ಮೌಲ್ಯಗಳನ್ನು ಸಾರ್ವಕಾಲಿಕ ಸತ್ಯಗಳನ್ನು ನಾವಿಂದು ಅರಿತುಕೊಳ್ಳಬೇಕಾಗಿದೆ.

ವಚನ ಸಾಹಿತ್ಯ ಹಿಂದೆಷ್ಟೇ ಸೃಷ್ಟಿಗೊಂಡ ಈಗ ನಿಂತಿದೆಯೆಂದಲ್ಲ. ಅದರ ಸೃಷ್ಟಿ ೧೨ ನೇ ಶತಮಾನದಿಂದ ಮೊದಲು ಮಾಡಿಕೊಂಡು ಇಂದಿನವರೆಗೂ ಹಂಗಡಿ-ಯದೆ ಮುಂದುವರಿದುಕೊಂಡು ಬಂದಿದೆ. ಕನ್ನಡದಲ್ಲಿ ವಚನವು ಒಂದು ಪ್ರಮುಖ ಸಾಹಿತ್ಯ ಪ್ರಕಾರವಾಗಿ ಬೆಳದುಕೊಂಡು ಬಂದಿದೆ. ಅದರಲ್ಲಿ ಪ್ರಮುಖವಾಗಿ ಬಸವ ಪೂರ್ವಯುಗ (೧೧ ನೇ ಶತಮಾನ), ಬಸವಯುಗ (೧೨ ನೇ ಶತಮಾನ), ವಿರಕ್ತ ಯುಗ (೧೫ ರಿಂದ ೧೮ ನೇ ಶತಮಾನ), ಆಧುನಿಕಯುಗ ೨೦ ನೇ ಶತಮಾನ ಎಂದು ನಾಲ್ಕು ಘಟ್ಟಗಳನ್ನು ಸ್ಥೂಲವಾಗಿ ಕಲ್ಪಿಸಬಹುದು. ಬಸವಪೂರ್ವಯುಗ ಹಾಗೂ ಬಸವಯುಗದಲ್ಲಿ ವಚನಸಾಹಿತ್ಯ ವಿಪುಲವಾಗಿ ಸೃಷ್ಟಿಗೊಂಡು, ಕನ್ನಡ ಸಾಹಿತ್ಯಕ್ಕೆ ವಿಶ್ವ ಮಾಲಿಕೆಯಲ್ಲಿ ಒಂದು ಶಾಶ್ವತ ಸ್ಥಾನ ಲಭಿಸುವಂತೆ ಮಾಡಿತು. ಅನುಭಾವ ಮಂಟಪದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಅನೇಕ ಶರಣರು ಸೇರಿ ತಮ್ಮ ಅಂತರಂಗದ ಅನುಭವವನ್ನು ಮುಕ್ತವಾಗಿ ಹೊರ ಹೊಮ್ಮಿಸಿದರು. ಇವುಗಳಿಗೆಲ್ಲ ಬಹುಮಟ್ಟಿನ ಪ್ರೇರಕಶಕ್ತಿ ಹಾಗೂ ಬೆನ್ನೆಲುಬು ಎಂದರೆ ಬಸವಣ್ಣನವರೆ ಅಂದಿನ ಯುಗಧರ್ಮ ಆ ಶರಣರಿಗೆ ವಚನ ರಚಿಸಲು ಅನಿವಾರ್ಯವಾಗಿತ್ತು. ಶರಣರೇನು ವಚನರಚಿಸಿ ಸಾಹಿತಿಗಳಾಬೇಕೆಂದು ಇಚ್ಛಿಸಿದವರಲ್ಲ. ಅವರ ಪ್ರಮುಖ ಕಾಳಜಿ ಸಮಾಜ ಸುಧಾರಣೆಯಾಗಿತ್ತು. ಆದ್ದರಿಂದ ಅವರೆಲ್ಲ ಪ್ರಮುಖವಾಗಿ ಸಮಾಜ ಸುಧಾರಕರೇ. ಅನಂತರ ಅವರು ವಚನಕಾರರು, ಕವಿಗಳು, ನಾವಿಂದು ಅವರ ವಚನಗಳಲ್ಲಿ ಸಾಹಿತ್ಯಿಕ ಅಂಶಗಳನ್ನು, ಜಾನಪದೀಯ ಅಂಶಗಳನ್ನು ಗುರುತಿಸುವೆವು. ಈ ಘಟ್ಟಗಳು ತರುವಾಯ ೧೫ನೇ ಶತಮಾನದಲ್ಲಿ ತೋಂಟದ ಸಿದ್ಧಲಿಂಗಯತಿ, ಅನಂತರ ಬಂದ ಕಾಡ ಸಿದ್ಧೇಶ್ವರ, ಜೇವಗಿಯ ಷಣ್ಮುಖ ಸ್ವಾಮಿ ಮುಂತಾದವರು ಬಸವಾದಿ ಶರಣರಂತೆಯೆ ವಚನಗಳನ್ನು ರಚಿಸಿದರು. ೧೨ ನೇ ಶತಮಾನದ ವಚನಗಳನ್ನು ಇವರು ಬಹುವಾಗಿ ಅನುಕರಿಸಿದ್ದಲ್ಲದೆ ಅವರ ಕಾಲದ ಸಮಸ್ಯೆಗಳಿಗೆ ಸ್ಪಂದಿಸಿದುದನ್ನು ಇವರ ವಚನಗಳಿಗೆ ಅಷ್ಟಾಗಿ ಪ್ರಾಶಸ್ತ್ಯ ಸಲ್ಲಲಿಲ್ಲ ಮಳೆ ಹನಿ ನಿಂತರೂ ಮರದ ಹನಿ ನಿಲ್ಲದೆಂಬಂತೆ ಇವರು ಬಸವಾದಿ ಶರಣರ ವಚನಗಳ ಧ್ಯೇಯ ಧೋರಣೆಗಳನ್ನು ಪುನಃ ಪುನಃ ತಮ್ಮ ವಚನಗಳ ಮೂಲಕ ಪುನರುಚ್ಚರಿಸಿದರು. ವೀರಶೈವ ಧರ್ಮದ ತತ್ವ ಸಿದ್ಧಾಂತ,

ಆಧ್ಯಾತ್ಮ, ಶಿವಯೋಗ ಹಾಗೂ ಇನ್ನಿತರ ಯೋಗಗಳನ್ನು ಕುರಿತ ವಿಚಾರಗಳನ್ನು ಇವರು ತಮ್ಮ ವಚನಗಳಲ್ಲಿ ಸವಿಸ್ತಾರವಾಗಿ ವರ್ಣಿಸಿದ್ದುಂಟು. ವಸ್ತು, ರೂಪ ಹಾಗೂ ರಚನಾ ವಿಧಾನಗಳಲ್ಲಿ ಯಾವ ವಿಧದ ಭಿನ್ನತೆಯನ್ನೂ ಹೊಂದದೆ ಹಾಗೆಯೇ ರಚನೆಗೊಳ್ಳುತ್ತ ಬಂದುದನ್ನು ಕಾಣುವೆವು. ಮುಂದೆ ೨೦ ನೇ ಶತಮಾದ ಆಧುನಿಕ ಯುಗದ ವಚನ ಸಾಹಿತ್ಯ ಬಂದಾಗ ಹಲವು ಬದಲಾವಣೆಗಳಾದುದನ್ನು ಕಾಣುವೆವು. ಮುಖ್ಯವಾಗಿ ಇಲ್ಲಿ ಬಸವ ಯುಗದ ವಚನ ಸಾಹಿತ್ಯಕ್ಕೂ ಆಧುನಿಕ ಯುಗದ ವಚನ ಸಾಹಿತ್ಯಕ್ಕೂ ರೂಪ, ರಚನಾ ವಿಧಾನ, ವಸ್ತು, ಧ್ಯೇಯ-ಧೋರಣೆ-ಮುಂತಾದವು ಗಳಲ್ಲಿರುವ ಭಿನ್ನತೆಯನ್ನು ಗುರುತಿಸಲು ಯತ್ನಿಸಲಾಗಿದೆ.

ಬಸವಾದಿ ಶರಣರ ವಚನಗಳ ವಸ್ತು ವೀರಶೈವ ಧರ್ಮದ ತತ್ವಗಳು ಹಾಗೂ ಅಂದಿನ ಸಮಾಜದಲ್ಲಿನ ಆಗು ಹೋಗುಗಳು, ಹಾಗೂ ವೈಪರೀತ್ಯ. ಅಂದಿನ ವಚನಗಳು ಆ ಸಮಾಜದಲ್ಲಿನ ಲೋಪದೋಷಗಳಿಗೆ ಹಿಡಿದ ಕನ್ನಡಿಗಳಾಗಿವೆ. ಶರಣರು ಅಂದಿನ ಸಮಾಜದಲ್ಲಿನ ಅನೇಕ ಸಮಸ್ಯೆಗಳಿಗೆ ಸ್ಪಂದಿಸಿದುದರ ಫಲಶ್ರುತಿಗಳೇ ಈ ವಚನಗಳು. ಅವು ಮೊದ ಮೊದಲು ವೀರಶೈವ ಧರ್ಮ ಪ್ರಸಾರದ ಉದ್ದೇಶವನ್ನಿರಿಸಿಕೊಂಡೇ ಹುಟ್ಟಿದರೂ ಅನಂತರ ಅವು ಅನೇಕ ಸಮಾಜ ಸಮ್ಮುಖವಾದ ವಿಚಾರಗಳನ್ನು ಒಳಗೊಂಡುದನ್ನು ಕಾಣಬಹುದು. ಮುಖ್ಯವಾಗಿ ಅವುಗಳಲ್ಲಿ ದೇವರ ಪ್ರಾರ್ಥನೆ, ದೈವೀಶಕ್ತಿಯ ಉಪಾಸನೆ, ಆತ್ಮಜಿಜ್ಞಾಸೆ, ನೀತಿಬೋಧೆ, ನಿವೇದನೆ, ಆಚಾರ-ವಿಚಾರ ಗಳ ನಿರೂಪಣೆ, ವೀರಶೈವ ಮತ ತತ್ವ ನಿರೂಪಣೆ, ಸಮಾಜ ವಿಡಂಬನೆ ಹಾಗೂ ಪರಮತ ಖಂಡನೆ ಇವೆಲ್ಲ ವಿಷಯಗಳು ಬರುವುವು. ಆದರೆ ಆಧುನಿಕ ಯುಗದ ಬಹು ಸಂಖ್ಯೆಯ ವಚನಕಾರರು ಯಾವುದೇ ಧರ್ಮವನ್ನು, ಅದರ ತತ್ವಗಳನ್ನು ಪ್ರಸಾರ ಮಾಡಬೇಕೆಂಬ ಉದ್ದೇಶ ಇರಿಸಿಕೊಂಡು ವಚನಗಳನ್ನು ಬರೆದವರಲ್ಲ. ಅವರ ಮೂಲ ಕಾಳಜಿ ಸಮಕಾಲೀನ ಸಮಾಜದಲ್ಲಿನ ನಾನಾ ಸಮಸ್ಯೆಗಳಿಗೆ ಸ್ಪಂದಿಸುವುದೇ ಆಗಿದೆ. ಉದಾಹರಣೆಗಾಗಿ ಕಾವ್ಯಾನಂದರ ವಚನವೊಂದನ್ನು ಇಲ್ಲಿ ನೋಡಹುದು.

> "ದಿನ ದಿನ ಗುಡಿಸಿಯೂ ದಿನ ದಿನ ಕಸ ಈ ಮನೆಯಲ್ಲಿ
> ದಿನ ದಿನ ಉಣಿಸಿಯೂ ದಿನ ದಿನ ಹಸಿವೆ ಈ ತನುವಿನಲ್ಲಿ .
> ದಿನ ದಿನ ಹಿಗ್ಗು ದಿನ ದಿನ ಕುಗ್ಗು ಈ ಮನದಲ್ಲಿ"
> ದಿನ ದಿನ ಗಳಿಕೆ, ದಿನ ದಿನ ದುರಾಶೆ ಈ ಧನದಲ್ಲಿ
> ಮತ್ತೆ ಮತ್ತೆ ಮಾಗಿ, ಮತ್ತೆ ಮತ್ತೆ ಸುಗ್ಗಿ ಈ ವನದಲ್ಲಿ
> ಹಂಬಲದ ಹೊಂಬಿಸಿಲು ನಿರಾಶೆಯ ಬಿರು ಬಿಸಿಲಾಗಿ,
> ಮತ್ತೆ ಹಾರೈಕೆಯ ಹೂ ಬಿಸಿಲಾಗುವುದು ಈ ಗಗನದಲ್ಲಿ

ಈ ಅಂತವಿಲ್ಲದ ವಿರೋಧಾಭಾಸದ
ಕೊನೆಯಿಲ್ಲದ ಕಣ್ಣು ಮುಚ್ಚಾಲೆಯ
ಪರಮ ರಹಸ್ಯವೇನು ಹೇಳಾ ಸ್ವತಂತ್ರ ಧೀರ ಸಿದ್ಧೇಶ್ವರಾ ;

ಇಲ್ಲಿ ಕಾವ್ಯಾನಂದರು ದೈನಂದಿನ ಸಮಸ್ಯೆಗಳನ್ನು ಅರ್ಥವಾಗಿ ಹೊರಗೆಡ-ಹುತ್ತ ಅವುಗಳ ಪರಿಹಾರ ಹೇಗೆ? ಯಾರಿಂದ? ಎಂಬುದನ್ನು ತುಂಬ ಸ್ವಾರಸ್ಯ ಮಯವಾಗಿ ತೆರೆದಿಟ್ಟಿದ್ದಾರೆ. ಆಧುನಿಕ ವಚನಕಾರರು ಹೆಚ್ಚಾಗಿ ಸಮಕಾಲೀನ ಸಮಸ್ಯೆಗಳನ್ನು ಚಿತ್ರಿಸುವತ್ತ ಲಕ್ಷ್ಯ ವಹಿಸಿದ್ದಾರೆ. ಡಾ. ಎಂ.ಎಸ್. ಲಠ್ಠೆಯವರು ಕಾವ್ಯಾನಂದರ ವಚನಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೀಗೆವ್ಯಕ್ತ ಪಡಿಸಿದ್ದಾರೆ. "ಒಂದು ಮತ, ಶಾಸ್ತ್ರ, ತತ್ವಗಳ ಪಡಿಮಚ್ಚಿನ ಮೇಲೆ ಈ ವಚನಗಳ ರಚನೆಯಾಗಿಲ್ಲ ಲೌಕಿಕ ಜೀವನಾನುಭವದ, ವಾಸ್ತವಿಕ ಜಗತ್ತಿನ ಆಗು ಹೋಗುಗಳ ಸುತ್ತ ಹೆಣೆದು ಕೊಂಡು ಬಂದುದರಿಂದ ಜನಸಾಮಾನ್ಯರಿಗೂ ಅರ್ಥವಾಗುವಂತಿವೆ." ಈ ಮಾತು ಬಹುಸಂಖ್ಯೆಯ ಆಧುನಿಕ ವಚನಕಾರರ ವಚನಗಳಿಗೂ ಅನ್ವಯಿಸುವಂಥದಾಗಿದೆ. ಶ್ರೀ ಎಸ್. ವಿ. ರಂಗಣ್ಣನವರ ಒಂದು ವಚನವೂ ಇದೇ ಅಭಿಪ್ರಾಯದಂತೆ.

1. "ವಚನೋದ್ಯಾನ" – ಡಾ|| ಸಿದ್ಧಯಪುರಾಣಿಕ
2. ವಚನೋದ್ಯಾನದ ಕೊನೆಪುಟ –

ಮೂಡಿ ಬಂದಿರುವಂತಿದೆ.. ಆ ವಚನ ಹೀಗಿದೆ ;

"ಹುಲ್ಲು ಅಂಬಲಿ ಹಸುಗಳಿಗೆ
ಹುರುಳಿ ಬೆಲ್ಲ ಕುದುರೆಗೆ ಇಷ್ಟ
ಭೂಮಿಗೆ ಇಷ್ಟ ಗೊಬ್ಬರ ಸೊಪ್ಪು,
ಹಾಲು ಬಿಸ್ಕತ್ತು ನಾಯಿಗೆ ಇಷ್ಟ
ಆದರೆ ನೋಡ ರಂಗ,
ನೌಕರಗೆ ಇಷ್ಟ ದುಡಿಯದೆ ಬಂದ ದುಡ್ಡು"

ಇಂದಿನ ವಿದ್ಯಮಾನಗಳನ್ನು ಅತ್ಯಂತ ಸರಳವಾಗಿ ಈ ವಚನ ಪ್ರಕಟಿಸುವುದನ್ನು ಕಾಣಬಹುದು. ಇಲ್ಲಿ ಅಧುನಿಕ ವಚನಕಾರರು ವಚನಗಳನ್ನು ಒಂದು ಸಾಹಿತ್ಯ ಪ್ರಕಾರವಾಗಿ ದುಡಿಸಿಕೊಂಡುದು ಕಂಡು ಬರುತ್ತದೆ. ಆಧುನಿಕ ವಚನಗಳಲ್ಲಿ ಸಾಂಪ್ರದಾಯಿಕತೆ ಇದ್ದಂತೆ ಆಧುನಿಕ ವಿಚಾರಗಳೂ ಇವೆ. ಎಸ್. ವ್ಹಿ. ಪರಮೇಶ್ವರ ಭಟ್ಟರ ಆಧುನಿಕ ವಿಚಾರಗಳನ್ನು ಒಳಗೊಂಡ ವಚನದ ಕೆಲ ಸಾಲುಗಳನ್ನಿಲ್ಲಿ ಉದಾಹರಿಸಬಹುದು.

“ನಮ್ಮ ಕೈಗಾರಿಕೆಯ ಸಿರಿಯನೇನ ಬಣ್ಣಿಪೆನಯ್ಯಾ
ನಮ್ಮ ಗುಂಡುಸೂಜಿ ಕಾಗದಕ್ಕೆ ಚುಚ್ಚಿಕೊಂಬುದಿಲ್ಲ
ನಮ್ಮ ಬ್ಲೇಡು ಗಡ್ಡವ ಹರಿದುದಿಲ್ಲ
ನಮ್ಮ ಬಲ್ಬು ನೆಟ್ಟಗೆ ಉರಿದುದಿಲ್ಲ”

ಇವರದೇ ಇನ್ನೊಂದು ವಚನದಲ್ಲಿ ಆಧುನಿಕ ದಂಪತಿಗಳ ಬದುಕು ವಿರುದ್ಧ ದಿಕ್ಕಿನಿಂದ ಕೂಡಿರುವ ವಿಷಯವನ್ನು ಈ ಕೆಳಗಿನ ವಚನದಲ್ಲಿ ಸಾಂಕೇತಿಕಾರ್ಥವಲ್ಲಿ ಬಿಡಿಸಿದ್ದಾರೆ.

“ಸ್ಕೂಟರ್ ನಡೆಸುವ ಗಂಡನಮುಖ
ಪಯಣ ದಿಕ್ಕಿಗೆ ಮನೆಯ ಕಡೆಗೆ,
ಹಿಂದೆ ಕುಳಿತ ಹೆಂಡತಿಯ ಮುಖ
ಬೀದಿಯ ದಿಕ್ಕಿಗೆ ಅಂಗಡಿಯ ಕಡೆಗೆ,
ಹೀಗೆ ಪತಿಯ ಮುಖ ಅತ್ತ ಸತಿಯ ಮುಖ ಇತ್ತ”

ಹೀಗೆ ಆಧುನಿಕ ಯುಗದ ವಚನಕಾರರು ಗಂಡು ಹೆಣ್ಣಿನ ದೃಷ್ಟಿಕೋನಗಳನ್ನು, ಸಮಸ್ಯೆ-ಬಿರುಕುಗಳನ್ನು ಕುರಿತು ಅನೇಕ ವಚನಗಳನ್ನು ರಚಿಸಿದ್ದು ಕಂಡು ಬರುತ್ತದೆ. ಇವರ ವಚನಗಳಲ್ಲಿ ಬಸವಾದಿ ಶರಣರ ವಚನಗಳಂತೆ ಭಕ್ತಿ, ಆತ್ಮಶೋಧನೆ, ಪ್ರಕೃತಿ ವರ್ಣನೆ ಹಾಗೂ ವೈಚಾರಿಕತೆ ಎಡೆ ಪಡೆದಿವೆ. ಇವು ಮತಾತೀತವಾದ ಭಕ್ತಿಯನ್ನೂ ಲೌಕಿಕ ಜೀವನದ ವಿವಿಧ ನಿಲುವುಗಳನ್ನು ಒಳಗೊಂಡುದು ಗಮನಾರ್ಹವಾಗಿದೆ. ಬಸವಾದಿ ಶರಣರ ವಚನಗಳ ಪ್ರಭಾವ ಇವುಗಳ ಮೇಲಾದರೂ ವಸ್ತುವಿನ ದೃಷ್ಟಿಯಿಂದ ಇವು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿವೆ.

ಹನ್ನೆರಡನೇ ಶತಮಾನದ ವಚನಕಾರರು ಬರೆದಂತೆ ಬದುಕಿ ತೋರಿಸಿದರು. ಬದುಕಿನಲ್ಲಿ ಕಂಡುಂಡ ಅನುಭವಗಳನ್ನೇ ಪ್ರಾಮಾಣಿಕವಾಗಿ ಅಭಿವ್ಯಕ್ತ ಪಡಿಸಿದರು ತಮ್ಮ ವಚನಗಳ ಮೂಲಕ ಅವರ ಬದುಕು ತೆರೆದಿಟ್ಟ ಪುಸ್ತಕ. ಅವರು ಘನ ಮನ ಸಂಪನ್ನರು. ದಾರ್ಶನಿಕರು, ಅನುಭಾವಿಗಳು ಎಂದೆಲ್ಲ ಜನ ಅವರನ್ನು ಗುರುತಿಸಿ ಗೌರವ ಸಲ್ಲಿಸುವುದುಂಟು. ಅವರಿಗೆ ಬದುಕು ದೊಡ್ಡದಾಗಿ ಕಂಡಿದೆ. ಬದುಕಿನಲ್ಲಿ ಅವರಿಗೆ ಬರೆಯುವುದು ಅನಿವಾರ್ಯವೆನ್ನಿಸಿದ್ದರಿಂದ ಅವರು ವಚನಗಳನ್ನು ಬರೆದಿದ್ದಾರೆ. ಅವರ ನಡೆಯೇ ನುಡಿಗಳಾಗಿವೆಯೆಂದರೆ ಅತಿಶಯೊಕ್ತಿಯೇನಲ್ಲ. ಮಹಾದೇವಿಯಕ್ಕ ಒಂದೆಡೆ “ನಡೆಯದೆ ನುಡಿಗಡಣ, ಮಾಡದ ಕಲಿತನ, ಚಿತ್ರದ ಸತಿಯ ಶೃಂಗಾರ ವೇತಕ್ಕೆ ಪ್ರಯೋಜನ ಎಂದಿದ್ದಾಳೆ. ಆದರೆ ಈಗಿನ ವಚನಕಾರರು ಹಾಗಲ್ಲ ಇವರು ಮುಖ್ಯವಾಗಿ ಕವಿಗಳು, ಸಾಹಿತಿಗಳು, ವಚನಗಳನ್ನು ಸಾಹಿತ್ಯ ಪ್ರಕಾರ

ವೆಂದರಿತು ರಚಿಸಿದವರು. ಇವರ ನುಡಿಗೂ-ನಡೆಗೂ ತಳಕು ಹಾಕಿ ನೋಡುವು ದಾಗಲೀ, ಇವರನ್ನು ಶರಣರಂತೆ ಕಾಣುವುದಾಗಲೀ ಸಾಧುವೆನ್ನಿಸದು. ಧಾರ್ಮಿಕ ಪ್ರವೃತ್ತಿ, ಹಾಗೂ ಅದರ ಮೂಲ ಪ್ರೇರಣೆಗಳಿಂದಲೇ ವಚನಗಳನ್ನೇನು ಇವರು ಬರೆದವರಲ್ಲ. ಧಾರ್ಮಿಕ ದೃಷ್ಟಿ ನೀತಿ ಇವೆಲ್ಲ ಇವರ ವಚನಗಳಲ್ಲಿ ಬಂದಿಲ್ಲವೆಂದಲ್ಲ. ಬಂದರೂ ಇವೇ ಪ್ರಮುಖವಾಗಿ ಇಲ್ಲ. ಕೆಲವು ವಚನಕಾರರು ತಮ್ಮ ವಚನಗಳಲ್ಲಿ ರೀತಿ-ನೀತಿ ನಡಾವಳಿ ಹಾಗೂ ಧಾರ್ಮಿಕ ತತ್ವಗಳಿಗೆ ಪ್ರಾಶಸ್ತ್ಯ ಕೊಟ್ಟಿದ್ದಾರ ಇದಕ್ಕೆ ಇಲ್ಲಿ ಉದಾಹರಣೆಯಾಗಿ ಅನ್ನದಾನೀಶ್ವರಸ್ವಾಮಿಗಳ ವಚನವೊಂದನ್ನು ಉದಾಹರಿಸಬಹುದು :

"ಶಿವನು ನಿರ್ಮಿಸಿದನು ಮಾನವರನು
ಮಾನವನು ರಚಿಸಿಹನು ಜಾತಿ ಮತಗಳನು
ಜಾತಿ ಮತಗಳೆಷ್ಟಾದರೇನು ? ನೀತಿ ಯೊಂದಲ್ಲವೇ ?
ನೀತಿ ನಿಯಮದಿ ನಿಲ್ಲೆ ಮಹಾಮಾನವನೆಂದೆ
ನಮ್ಮ ಮೃಡಗಿರಿ ಅನ್ನದಾನೀಶ

ಆಧುನಿಕ ವಚನಕಾರರು ಬಸವಾದಿ ಶರಣರ ಮಾರ್ಗದಲ್ಲಿ ನಡೆಯಲು ಯತ್ನಿಸಿದರೂ, ಅವರೊಡನೆ ಇವರನ್ನು ನಿಲ್ಲಿಸಿ ಕಾಣುವುದು ಅಷ್ಟೊಂದು ಸಾಧುವಾಗದು. ಶರಣರು ಶರಣರೇ. ಶರಣರನ್ನು ನಾವಿಂದು ಪ್ರಮುಖವಾಗಿ ಕವಿ, ಸಾಹಿತಿ ಎಂದಷ್ಟೇ ಗುರು ತಿಸುವುದಿಲ್ಲ. ಅವರ ಬರಹದ ಹಿಂದಿರುವ ಅವರ ಬದುಕಿಗೆ, ಅವರ ಜೀವನಾ ದರ್ಶಗಳಿಗೆ ಪ್ರಾಧಾನ್ಯತೆಯನ್ನು ಕೊಡುವೆವು. ಅವರು ಕವಿಗಳೆಂದು ಜನಮನದಲ್ಲಿ ಇಂದು ಹೆಚ್ಚಾಗಿ ಉಳಿಯದೆ ಧಾರ್ಮಿಕ ಮಹಾ ಪುರುಷರು ದಾರ್ಶನಿಕರು ಎಂದು ಜನ-ಮನೋ ಮಂದಿರದಲ್ಲಿ ನೆಲೆಸಿದ್ದಾರೆ. ಅವರ ವಚನಗಳನ್ನು ಅರಿಯದೆ ಎಷ್ಟೋ ಜನ ಅವರ ಚರಿತ್ರೆ ಮಹಿಮೆ ತಿಳಿದು ಅವರನ್ನು ಸ್ಮರಿಸುತ್ತಿದ್ದಾರೆ. ಅವರ ಬದುಕಿನ ದಿವ್ಯ ಆದರ್ಶಗಳು ಸಂದೇಶಗಳು ಮುಂದಿನ ಜನಾಂಗಕ್ಕೆ ದಾರಿ ದೀಪವಾದಂತೆ ಈಗಿನ ವಚನಕಾರರ ಬದುಕು ದಾರಿದೀಪವಾಗದು. ಹೆಚ್ಚೆಂದರೆ ನಾವು ಇವರನ್ನು ಕವಿಗಳು, ವಚನಕಾರರು ಎಂದಷ್ಟೇ ಗುರುತಿಸಿ ಗೌರವಿಸುವೆವು.

ಬಸವಾದಿ ಶರಣರ ವಚನಗಳು ಆಂತರಿಕ ಒತ್ತಡಗಳಿಂದ ಹಾಗೂ ಸುತ್ತಣ ಸಮಾಜದಲ್ಲಿನ ಸ್ಥಿತಿ ಗತಿಗಳಿಂದ ಪ್ರೇರಣೆಗೊಂಡು ಸಹಜವಾಗಿ ಸ್ಫುರಿಸಿದಂಥವು. ಅವರೇನು ಪ್ರಯತ್ನಪಟ್ಟು ಅವುಗಳನ್ನು ರಚಿಸಿದವರಲ್ಲ. ಸಹಜವಾಗಿ ಅವರಿಂದ ಸ್ಫೂರ್ತಿಗೊಂಡ ಹುಟ್ಟಿಕೊಂಡಂಥವು. ಅಂದಿನ ಸಮಾಜಕ್ಕೆ ಅನಿವಾರ್ಯವೆನ್ನುವಷ್ಟರ ಮಟ್ಟಿಗೆ ಅವು ಅಂದು ಪ್ರಸ್ತುತವಾಗಿವೆ; ಜನಪ್ರಿಯವಾಗಿವೆ ಅಂಥವುಗಳಲ್ಲಿ ಬಸವ ಣ್ಣನವರ ಎರಡು ವಚನಗಳಲ್ಲಿ ಉದಾಹರಿಸಬಹುದು. ಅಂದಿನ ಸಮಾಜದಲ್ಲಿ ಸಾಮಾನ್ಯ

ಜನ ಮೂಢರಾಗಿ, ಅಜ್ಞಾನದಿಂದ ಮಡಿ ಮೈಲಿಗೆ ಆಚರಿಸುವುದನ್ನು, ಗಿಡ, ಮರ, ಕಲ್ಲು, ನೀರುಗಳೆಲ್ಲ ದೇವರೆಂದು, ಪವಿತ್ರವೆಂದು ಭಾವಿಸಿ ಪೂಜಿಸುತ್ತಿರುರುವುದನ್ನು ಸ್ವತಃ ಬಸವಣ್ಣನವರು ಕಂಡು ಅವರ ಮೌಢ್ಯಕ್ಕೆ ಬೇಸತ್ತು ಅವನ್ನು ವಿಡಂಬಿಸಿದರು. ಅವರ ವಿಂಡಬನೆ ಅತ್ಯಂತ ಸಹಜವಾಗಿ ಹುಟ್ಟಿಕೊಂಡಂಥವು. ಆ ಆಯಾ ಸನ್ನಿವೇಶಗಳನ್ನು ಕಂಡು ಅಲ್ಲೇ ಕೊಂಡಂಥುದು. ಆ ವಚನ ಹೀಗಿದೆಃ

"ನೀರ ಕಂಡಲ್ಲಿ ಮುಳುಗುವರಯ್ಯ
ಮರವ ಕಂಡಲ್ಲಿ ಸುತ್ತುವರಯ್ಯ
ಬತ್ತುವ ಜಲವ ಒಣಗುವ ಮರನ
ಬಲ್ಲವರು ನಿಮ್ಮನೆತ್ತ ಬಲ್ಲರು
ಕೂಡಲಸಂಗಮ ದೇವಾ" ಎಂದಿದ್ದಾರೆ.

ಬಸವಣ್ಣನವರು ತಮ್ಮ ಇನ್ನೊಂದು ವಚನದಲ್ಲಿ ಜಾತಿ ಪದ್ಧತಿ ಎಂಬುದು ಮನುಷ್ಯನೇ ಕಲ್ಪಿಸಿ ಕೊಂಡಂಥದು. ದೇವರಾಗಲೀ, ಇನ್ನಾರಾಗಲೀ ಸೃಷ್ಟಿಸಿದ್ದಲ್ಲ ಎಂಬುದನ್ನು ಆಯಾ ಜಾತಿ-ಮತಗಳು ಆಯಾ ಮಾನವರು ಕೈಗೊಂಡ ಉದ್ಯೋಗಗಳಿಂದ ಬಂದಿವೆಯೇ ವಿನಾ ಅವರ ಹುಟ್ಟಿನಿಂದ ಅಲ್ಲ. ಎಂಬುದನ್ನು ಸ್ಪಷ್ಟಪಡಿಸಿದುದನ್ನು ಇಲ್ಲಿ ಕಾಣಬಹುದುಃ

"ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ
ಕುಲವೇನೋ ಆವಂದಿರ ಕುಲವೇನೋ........
ಕೂಡಲ ಸಂಗಮದೇವ"

ಎಂದು ಅಂದಿನ ಸಮಾಜವನ್ನು ಜಾತಿ ಹೆಸರಿನಲ್ಲಿ ವಿಭಜಿಸಿ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಪಟ್ಟಭದ್ರರಿಗೆ, ಸ್ವಾರ್ಥ ಹಿತಾಸಕ್ತರಿಗೆ ಅವರು ಸವಾಲು ಹಾಕಿದ್ದಾರೆ. ಇಂಥ ವಚನಗಳು ಸಹಜವಾಗಿ ಆಯಾ ಸಂದರ್ಭಗಳಿಂದ ಸ್ಫೂರ್ತಿ ಪಡೆದು ಹುಟ್ಟಿಕೊಂಡಂಥವೇ ವಿನಾ ಪ್ರಯತ್ನ ಪೂರ್ವಕವಾಗಿ ಬರೆದಂಥವು ಅಲ್ಲ. ವಚನ ರಚನೆ ಬಸವಾದಿ ಶರಣರಿಗೆ ಜೀವನದ ಅವಿಭಾಜ್ಯ ಅಂಗವಾಗಿತ್ತು. ಮತ್ತು ಅನಿವಾರ್ಯವಾಗಿತ್ತು ಅಂದಿನ ಸಮಾಜದಲ್ಲಿನ ಅರೆ-ಕೊರೆಗಳನ್ನು, ಲೋಪ-ದೋಷಗಳನ್ನು ಅವರು ಕಣ್ಣಾರೆ ಕಂಡು ಅವಕ್ಕೆಲ್ಲ ಪ್ರತಿಸ್ಪಂದಿಸಿದ ಫಲಗಳೇ ಇವಾದುದರಿಂದ ಇವುಗಳಿಗೆ ಮಹತ್ವ ಪ್ರಾಪ್ತವಾಗಿದೆ. ಇವುಗಳ ಹಿಂದೆ ಸಮಗ್ರ ಮಾನವ ಜನಾಂಗದ ಹಿತ ಚಿಂತನೆ, ಕಳಕಳಿ ಅಡಗಿರುವುದನ್ನು ಕಾಣುವೆವು. ಆದರೆ ಆಧುನಿಕ

ಯುಗದ ವಚನಗಳು ಕವಿಗಳ, ವಚನಕಾರರ ಆಂತರಿಕ ಒತ್ತಡಗಳಿಂದಲೇ ಸಹಜವಾಗಿ ಹುಟ್ಟಿಕೊಂಡಂಥವು ಎಂದು ಹೇಳಲು ಬಾರದು. ಏಕೆಂದರೆ ಇಂದಿನ ಬಹುತೇಕ ವಚನಕಾರರು ಸಾಹಿತ್ಯ ಸೃಷ್ಟಿಸಬೇಕೆಂಬ ಉದ್ದೇಶವನ್ನಿರಿಸಿಕೊಂಡು ವಚನಗಳನ್ನು ರಚಿಸಿದ್ದುಂಟು. ಇವರಿಗೆ ಇದೊಂದು ಸಾಹಿತ್ಯ ಪ್ರಕಾರವಾಗಿದೆಯೇ ವಿನಾ ಬಸವಾದಿ ಶರಣರಿಗೆ ಜೀವನದ ಅಂಗವಾದಂತೆ ಆಗಿಲ್ಲ. ಆದ್ದರಿಂದ ಈಗಿನ ಕೆಲವರ ವಚನಗಳ (ಅನುಕರಣ ಗುಣ, ಕೃತಕತೆ) ಬಸವಾದಿ ಶರಣರ ವಚನಗಳ ಪ್ರಭಾವ ಆದದ್ದುಂಟು. ಇದಕ್ಕೆ ಮಹಾದೇವ ಬಣಕಾರರ ಕೆಲವು ವಚನಗಳ ಸಾಲುಗಳನ್ನು ಇಲ್ಲಿ ಉದಾಹರಿಸಬಹುದು. "ಕುಲವಾವುದೆಂಬುದ ಹೇಳಿರೇ ಕುಲಮದಕ್ಕೆ ಹೋರುವ ಕುನ್ನಿಗಳಿರಾ" ಅಚ್ಚ ಶರಣನೆಂದು ಮುಚ್ಚುಮರೆಯಲಿ ಕಚ್ಚಿ ಕೈ ಬಾಯಿಗಳ ವಂಚಿಸುವ ಸಂಚುಗಾರನ ಶರಣಂಗೆ ಸರಿ ಎಂಬೇನೇ" "ತಿರುಕರಂತೆ ತಿರಿದುಂಬ ದೈವಂಗಳ ನಂಬಿ ತೀರ್ಥಂಗಳಿಗೆರೆವ ತಿಳಿಗೇಡಿಗಳಿಗೇನೆಂಬೆನಯ್ಯಾ" ಈ ಮುಂತಾದುವು ಬಸವಾದಿ ಶರಣರ್ಥ್ಯೇಯ ಧೋರಣೆಗಳನ್ನೇ ಒಳಗೊಂಡು ರಚನೆಗೊಂಡಂಥವೆಂಬುದು ಸ್ಪಷ್ಟ. ಸಾಹಿತ್ಯ ಸಾಮಾನ್ಯವಾಗಿ ಆಯಾ ಕಾಲಕ್ಕೆ ಬದ್ಧವಾಗಿರುತ್ತದೆ. ವಚನ ಸಾಹಿತ್ಯದಂಥ ಪ್ರಕಾರ ಮಾತ್ರ ಯಾವ ಕಾಲಕ್ಕೂ ಹಳೆಯದಾಗದಂಥದು. ಅದರಲ್ಲಿನ ಕೆಲ ವಿಷಯಗಳು, ಅಂಶಗಳು ಹಳೆಯವಾಗಬಹುದು. ಹನ್ನೆರಡನೇ ಶತಮಾನದ ಎಲ್ಲಾ ಸಮಸ್ಯೆಗಳೂ ಈಗ ಇರವು. ಆ ಸಮಸ್ಯೆಗಳನ್ನೇ ವಸ್ತುವಾಗಿಸಿಕೊಂಡು ಮುಂದೂ ವಚನ ರಚಿಸುತ್ತ ಹೋಗುವುದು ಅಷ್ಟೊಂದು ಸಮಂಜಸವೆನ್ನಿಸದು. ಈಗಿನ ಕಾಲದ ಅಗತ್ಯಗಳಿಗೆ ಸ್ಪಂದಿಸುವ ಹೊಸ ಹೊಸ ಸಮಸ್ಯೆಗಳಿಗೆ ಮುಖಾಮುಖಿಯಾಗಿ ನಿಲ್ಲುವ ವಚನಗಳನ್ನು ರಚಿಸುವುದು ಅಗತ್ಯವಾಗುತ್ತದೆ. ಹೀಗೆಂದ ಮಾತ್ರಕ್ಕೆ ಹಿಂದಿನ ಸಾಹಿತ್ಯ ಇಂದು ಸಂಪೂರ್ಣ ಪ್ರಸ್ತುತವಾಗದು ಎಂದಲ್ಲ. ಎಷ್ಟೋ ಕೃತಿಗಳು ಅವು ರಚನೆಗೊಂಡ ಕಾಲದ ಅನಂತರ ತಮಗೆ ಆ ಕಾಲದಲ್ಲಿದ್ದ ಮಹತ್ವವನ್ನು ಬರ ಬರುತ್ತ ಕಳೆದುಕೊಳ್ಳುವವು. ಆದರೆ ಬಸವಾದಿ ಶರಣರ ಬಹು ಸಂಖ್ಯೆಯ ವಚನಗಳಿಗೆ ಈ ಮಾತು ಅನ್ವಯಿಸದು. ಅವರ ಎಷ್ಟೋ ವಚನಗಳು ಇಂದಿಗೂ ತಮ್ಮ ಅರ್ಥವಂತಿಕೆಯನ್ನು, ಮಹತ್ವ ಮತ್ತು ಪ್ರಯೋಜನ ದೃಷ್ಟಿಯನ್ನು ಉಳಿಸಿಕೊಂಡು ಬಂದಿವೆ. ಅವುಗಳ ರೂಪ, ರಚನಾವಿಧಾನ ಹಾಗೂ ವಸ್ತುಗಳಿಗೆ ಮಾರುಹೋಗಿ ಜ. ಚ. ನಿ., ಎಸ್. ವಿ. ರಂಗಣ್ಣ, ಎಸ್. ವಿ. ಪರಮೇಶ್ವರ ಭಟ್ಟ ರಂಗನಾಥ ದಿವಾಕರ, ಕಾವ್ಯಾನಂದ, ಮಹಾದೇವ ಬಣಕಾರ, ಮೂಜಗಂ, ಅನ್ನದಾನೀಶ್ವರ ಸ್ವಾಮಿಗಳು, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಸಂಗಮೇಶ ಹೊಸಮನಿ, ಶಿವಲಿಂಗಮ್ಮಾ ಕಟ್ಟಿ, ಸಂಗಮೇಶ ಹಂಡಿಗಿ, ಶಿವಲೀಲಾ ಹಂಗಿಡಿ, ಕಮಲಾಹಂಪನಾ ಮುಂತಾದವರು (ಸು. ನೂರಕ್ಕಿಂತಲೂ ಹೆಚ್ಚು ಜನ) ವಚನಗಳನ್ನು ರಚಿಸಿದ್ದುಂಟು. ಇವರೆಲ್ಲಾ ಏಕ ಪ್ರಕಾರದ ಯಶಸ್ಸು ಪಡೆದಿದ್ದಾರೆಂದಲ್ಲ. ಇವರಲ್ಲಿ ಕೆಲವರ ವಚನಗಳು

ಬಸವಾದಿ ಶರಣರ ವಚನಗಳ ಪಡಿಯಚ್ಚು, ಅನುಕರಣೆಗಳಾದರೆ, ಇನ್ನೂ ಕೆಲವರವು ಸ್ವಪ್ರತಿಭೆಯಿಂದ ಸ್ವತಂತ್ರ ಕಲಾ ಕೃತಿಗಳಾಗಿ ಮೂಡಿ ಬಂದಿವೆ. ಕಾವ್ಯಾನಂದರಂಥ ಕವಿಗಳು ತಮ್ಮ ವಚನಗಳಲ್ಲಿ ನವೀನ ದೃಷ್ಟಿಯನ್ನು ಹರಿಸಿದ್ದಾರೆ. ಮಾನವೀಯ ಸಹಜ ಸ್ಪಂದನ, ಸದ್ಯದ ಸಮಾಜದ ಸ್ಥಿತಿ-ಗತಿ, ಲೋಕಾನುಭವ, ಹಲವಾರು ಸಮಸ್ಯೆಗಳ ಒಳನೋಟಗಳು ಇವನ್ನೆಲ್ಲ ಅಸ್ಪಾದೃಶವಾದ ರೀತಿಯಲ್ಲಿ ತಮ್ಮ ವಚನಗಳಲ್ಲಿ ತಂದಿದ್ದಾರೆ. ಈ ರೀತಿ ಸಮಕಾಲಿನ ಸಮಾಜದ ಸ್ಥಿತ್ಯಂತರಗಳಿಗೆ ಕಾವ್ಯಾನಂದರು ಸ್ಪಂದಿಸುವುದರ ಜೊತೆಗೆ ಭಾಷಾ ದೃಷ್ಟಿಯಿಂದ ವಿನೂತನವಾದ ಪ್ರಯೋಗ ಮಾಡಿ-ದ್ದಾರೆ. ಅವರ ಪ್ರಯೋಗಶೀಲ ಮನಸ್ಸು ಅವರ ವಚನಗಳಲ್ಲಿ ಗರಿಗೆದರಿದೆ, ವಚನಗಳುದ್ದಕ್ಕೂ ಏಕ ಪ್ರಕಾರವಾಗಿ ಪ್ರವಹಿಸಿದೆ. ಬಸವಾದಿ ಶರಣರ ವಚನಗಳ ಪ್ರಭಾವ ಇವರ ಮೇಲಾದರೂ ಇವರ ರಚನೆಗಳು ಸ್ವತಂತ್ರವಾದವುಗಳಾಗಿವೆ. ಹೊಸ ಯುಗದ ಅವಶ್ಯಕತೆ ಹಾಗೂ ಸಮಸ್ಯೆಗಳನ್ನು ಗಮನದಲ್ಲಿರಿಸಿಕೊಂಡು ಪರಿಣಾಮಕಾರಿಯಾಗಿ ಸ್ಪಂದಿಸಿದುದನ್ನು ಇವರ ವಚನಗಳಲ್ಲಿ ಕಾಣುವೆವು. ಇವರದೊಂದು ವಚನವನ್ನು ಇಲ್ಲಿ ನೋಡಬಹುದು.

"ವಿದ್ಯೆಬಂತು, ವಿನಯ ಹೋಯ್ತು;
ಬುದ್ಧಿ ಬಂತು, ಶ್ರದ್ಧೆ ಹೋಯ್ತು
ಶ್ರದ್ಧೆ ಬಂತು, ವಿವೇಚನೆ ಹೋಯ್ತು
ಸಮೃದ್ಧಿ ಬಂತು ಸಂಸ್ಕೃತಿ ಹೋಯ್ತು
ವಿಜ್ಞಾನ ಬಂತು ಸಮಾಧಾನ ಹೋಯ್ತು
ಶರೀರ ಸ್ವಾಸ್ಥ್ಯ ಬಂತು ಚಿತ್ತ ಸ್ವಾಸ್ಥ್ಯ ಹೋಯ್ತು
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು
ಬೋಧನೆ ಬಂತು ಸಾಧನೆ ಹೋಯ್ತು
ಮಾತು ಬಂತು ಕೃತಿಯು ಹೋಯ್ತು
ಜಾತಿ ಬಂತು ಪ್ರೀತಿ ಹೋಯ್ತು
ಸ್ವಾತಂತ್ರ್ಯ ಬಂತು ಸೌಜನ್ಯ ಹೋಯ್ತು
ಸಿದ್ದಯ್ಯ ಪುರಾಣಿಕ ಬಂದ,
ಸ್ವತಂತ್ರ ಧೀರ ಸಿದ್ಧೇಶ್ವರ ಹೋದ !

ಇಲ್ಲಿ ಕಾವ್ಯನಂದರು ಆಧುನಿಕ ಯುಗದ ವಿದ್ಯಮಾನಗಳಿಗೆ ಸ್ಪಂದಿಸುವುದರ ಜೊತೆಗೆ, ಆಧುನಿಕ ಮಾನವನ ಸ್ವರೂಪವನ್ನು ಪರಾಮರ್ಶಿಸಿದ್ದಾರೆ. ಆಧುನಿಕ ಸಮಾಜದ ಬಗೆಗಿನ ಈ ರೀತಿ ಸ್ಪಂದನ ಅನನ್ಯವಾಗಿದೆ. ವಚನ ಸಾರ್ಥಕವಾದ

ಸಾಹಿತ್ಯ ಪ್ರಕಾರವಾಗಿದೆ, ಇಂಥಲ್ಲಿ. ಆಧುನಿಕ ವಚನಸಾಹಿತ್ಯದ ವಸ್ತು ಮಾನವನನ್ನೇ ಕುರಿತದ್ದಾಗಿದೆ ಎಂಬುದು ಸ್ಪಷ್ಟ. ಇಂದಿನ ಮಾನವನ ಆಸೆ, ಆಕಾಂಕ್ಷೆ, ಸಾಧನೆ ಸಿದ್ಧಿಗಳನ್ನೆಲ್ಲಾ ಕುರಿತು ಅದು ವರ್ಣಿಸಿದೆ. ಕಾಲದ ಅವಶ್ಯಕತೆಗಳಿಗೆ ತಕ್ಕಂತೆ ಅದು ಅನೇಕ ಮಾರ್ಪಾಟುಗಳನ್ನು ಪಡೆಯುತ್ತ ಬಂದುದನ್ನು ನಾವು ಮೇಲ್ಕಾಣಿಸಿದಂತಹ ವಚನಗಳಲ್ಲಿ ಕಾಣುವೆವು. ಇದೇ ಆಧುನಿಕ ವಚನಗಳ ಸಾಧನೆಯೂ ಆಗಿದೆ.

ಬಸವಾದಿ ಶರಣರ ಹಾಗೂ ಆಧುನಿಕರ ವಚನಗಳಲ್ಲಿ ವಸ್ತುವಿನ ದೃಷ್ಟಿಯಿಂದ ಗಮನಾರ್ಹವಾದ ಭಿನ್ನತೆಗಳಿದ್ದರೂ ರೂಪ ಹಾಗೂ ರಚನಾವಿಧಾನ (Structure) ಗಳಲ್ಲಿ ಅಂಥ ಬಿನ್ನತೆಗಳೇನಿಲ್ಲ. ಆಗಿನ ವಚನಕಾರರು ತಮ್ಮ ಅದಿ ದೈವವನ್ನು, ಶರಣೆಯರು ತಮ್ಮ ಪತಿಯ ಹೆಸರುಗಳನ್ನು ಅಂಕಿತವಾಗಿರಿಸಿ ಕೊಳ್ಳುತ್ತಿದ್ದರೆ, ಈಗಿನವರೂ ಅದೇ ರೀತಿ ಅದಿದೈವ ಪತಿ, ಪತ್ನಿಯರ, ಗುರುಗಳ ಹಾಗೂ ಮಠಾಧೀಶರ ಹೆಸರುಗಳನ್ನು ಅಂಕಿತಗಳಾಗಿ ಬಳಸಿಕೊಂಡುದುದನ್ನು ಕಾಣಬಹುದು. ಹೀಗೆ ಬಳಸಿ ಕೊಳ್ಳುವಲ್ಲಿ ಇವರು ಬಸವಾದಿಶರಣರ ಮೇಲ್ಪಂಕ್ತಿಯನ್ನು ಅನುಸರಿಸಿದ್ದು ಸ್ಪಷ್ಟ.

ಒಟ್ಟಿನಲ್ಲಿ ಕನ್ನಡದಲ್ಲಿ ವಚನಸಾಹಿತ್ಯ ಒಂದ ಸದೃಢ ಪ್ರಕಾರವಾಗಿ ಬೆಳೆದು ಬಂದುದನ್ನು ಅಧುನಿಕ ವಚನವಾಹಿತ್ಯ ದೃಢಪಡಿಸುತ್ತದೆ. ಮತಾತೀತವಾದ ಭಕ್ತಿ ಸಾರ್ವತ್ರಿಕ ಸತ್ಯಗಳನ್ನು ಜೀವನಮೌಲ್ಯಗಳನ್ನು ಒಳಗೊಂಡು ಆಧುನಿಕ ವಚನ ಸಾಹಿತ್ಯ ಇಂದು ಒಂದು ಜನಪ್ರಿಯ ಪ್ರಕಾರವಾಗಿ ಎಲ್ಲರನ್ನೂ ಆಕರ್ಷಿಸುತ್ತಲಿದೆ. ಇವರ ಮೇಲೆ ಬಸವಾದಿ ಶರಣರ ವಚನಗಳ ಪ್ರಭಾವವಾದರೂ ಕೆಲವು ಮಹತ್ವದ ಆಧುನಿಕ ವಚನಕಾರರು ಅದನ್ನು ಮೀರಿ ಬೆಳೆದಿದ್ದಾರೆ, ಬೆಳೆಯುತ್ತಿದ್ದಾರೆ. ವಚನಗಳ ರಚನೆ ಇಂದು ಪ್ರಯೋಗದ ಹಂತವನ್ನು ಮೀರಿ ಬೆಳೆಯುತ್ತಿದ್ದು ಸಾಕಷ್ಟು ಪ್ರಸಿದ್ಧಿಯನ್ನು ಈ ಸಾಹಿತ್ಯ ಪ್ರಕಾರ ಪಡೆದಿದೆ. ಬಸವಾದಿ ಶರಣರ ವಚನಗಳಿಗೂ ಆಧುನಿಕ ಯುಗದ ವಚನಗಳಿಗೂ ಇರುವ ಭಿನ್ನತೆಗಳನ್ನು ಅಧ್ಯಯನ ಮಾಡುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ಆ ದಿಸೆಯಲ್ಲಿ ಈ ಲೇಖನ ಒಂದು ಕಿರು ಪ್ರಯತ್ನ.

---

ಡಾ. ವ್ಹಿ.ಜಿ. ಪೂಜಾರ, ಎಂ.ಎ., ಪಿ.ಎಚ್.ಡಿ.
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.



# ಮಹಾಕವಿ ಕುವೆಂಪು



ಕನ್ನಡ ಸಾಹಿತ್ಯ ಹಿಮಾಲಯವನ್ನು ಸಿಂಹಾವಲೋಕನ ಮಾಡಿದಾಗ ಮೂರು ಉತ್ತುಂಗಶಿಖರಗಳು ಕಾಣಿಸುತ್ತವೆ. ಅವು ಸಾಮಾನ್ಯ ಶಿಖರಗಳಲ್ಲ; ಮಹತ್ವದಿಂದ ಕೂಡಿದ ಬೃಹತ್ ಶಿಖರಗಳು. ಅದರಲ್ಲಿ ಮೊದಲನೆಯ ಶಿಖರ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದ ನಾಡೋಜ ಪಂಪನಾದರೆ, ಎರಡನೆಯ ಶಿಖರವೇ ರೂಪಕ ಸಾಮ್ರಾಜ್ಯ ಚಕ್ರವರ್ತಿ ಗದುಗಿನ ನಾರಣಪ್ಪ. ಇನ್ನು ಮೂರನೆಯ ಶಿಖರವೇ ಪೂರ್ಣದೃಷ್ಟಿ ಪಥದ ಹರಿಕಾರ ರಸಋಷಿ ಕುವೆಂಪು.

ಹಿಮಾಲಯದ ಗೌರೀಶಂಕರದ ಎತ್ತರಕ್ಕೆ ಬೆಳೆದ ಕನ್ನಡ ಸಹ್ಯಾದ್ರಿಯ ಕಂದ ಕುವೆಂಪು ಕನ್ನಡ ಸಾರಸ್ವತ ಲೋಕದ ಅನರ್ಘ್ಯರತ್ನ. ಅವರು ಕೇವಲ ಬರಹದಿಂದಷ್ಟೇ ದೊಡ್ಡವರಾಗಲಿಲ್ಲ. ಬದುಕಿನಿಂದಲೂ ಅವರು ದೊಡ್ಡವರಾಗಿ ಬೆಳಗಿದರು. ಅವರ ಸಾಹಿತ್ಯ ಕಾವೇರಿನದಿಯಂತೆ ಪ್ರಶಾಂತವಾಗಿ ಹರಿಯಿತು, ಜೊತೆಗೆ ಸಿಡಿಲು-ಗುಡುಗು ಮಿಂಚುಗಳೊಂದಿಗೆ ರಭಸದ ಮಳೆಯಾಗಿ ಸುರಿಯಿತು. ಮಾನವನ ಬದುಕಿಗೆ ಅಮೂಲ್ಯವೆನಿಸಿದ್ದನ್ನು ಅಪ್ಪಿ ಆಲಿಂಗಿಸಿತು. ಮಾರಕವೆನಿಸುವ ಹೀನ-ಅನರ್ಥ ಸಂಪ್ರದಾಯಗಳ ವಿರುದ್ಧ ಹೋರಾಟವನ್ನೇ ನಡೆಸಿತು. ಅವರ ದೈತ್ಯ ಪ್ರತಿಭೆ ತುಂಬಾ ಅಸಾಧಾರಣವಾದುದು. ಸಾಗರದಷ್ಟು ಆಳ, ಆಕಾಶದಷ್ಟು ವಿಶಾಲ, ಭೂಮಿಯಷ್ಟೇ ತೂಕ.

ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪನವರು ೧೯೦೪ಳ ಡಿಸೆಂಬರ್ ೨೯ ರಂದು ಹಿರೇಕೊ ಡುಗೆಯಲ್ಲಿ ಜನಿಸಿದರು. ಹಿರೇಕೊಡಿಗೆ ಅವರ ತಾಯಿ ಸೀತಮ್ಮನವರ ತವರೂರು. ಕುಪ್ಪಳ್ಳಿ ಮಲೆನಾಡಿನ ಹೃದಯವಾದ ತೀರ್ಥಹಳ್ಳಿ ತಾಲ್ಲೂಕಿನಲ್ಲಿದೆ. ಕುಪ್ಪಹಳ್ಳಿ ತಂದೆಯಾದ ವೆಂಕಟಪ್ಪನವರ ಊರು. ಪ್ರಾಥಮಿಕ ವಿದ್ಯಾಭ್ಯಾಸ ಅಲ್ಲೇ ಸಾಗಿತು. ತುಮಕೂರಿನ ಮೊಸೆಸ್ ಮಾಸ್ತರು ಅವರ ಗುರುಗಳಾಗಿದ್ದರು. ಅಕ್ಷರ ವಿದ್ಯೆಯೊಂದಿಗೆ ಅವರಿಗೆ ಪ್ರಕೃತಿ ಒಲವೂ ಬೆಳೆಯಿತು. ಮಲೆನಾಡಿನ ಹಸುರುಗಟ್ಟಿದ ಗಿರಿಕಾನನ ಹರಿಯುವ ಹೊಳೆ, ಉಲಿಯುವ ಹಕ್ಕಿಗಳು, ಅಲೆದಾಡುವ ಮೃಗಗಳು, ಅರಳಿದ ಹೂವು ಗಳು, ಗುಂಯ್‌ಗುಡುವ ದುಂಬಿಗಳು, ಪ್ರಶಾಂತ ವಾತಾವರಣ, ಆಹ್ಲಾದಕರವಾದ ಗಾಳಿ ಕವಿಯಲ್ಲಿ ಸೌಂದರ್ಯ ಪ್ರಜ್ಞೆಯನ್ನುಂಟುಮಾಡಿತು. ಸಹ್ಯಾದ್ರಿಯ ವನದೇವತೆ ಕವಿಹೃದಯದಲ್ಲಿ ನೆಲೆಮಾಡಿದಳು. ಕುವೆಂಪು ಅವರೇ "ಸಹ್ಯಾದ್ರಿ ಅರಣ್ಯ ದೇವಿ ನನ್ನ ಕವಿಚೇತನದಲ್ಲಿ ದೈವದತ್ತವಾಗಿದ್ದು ಪ್ರಸುಪ್ತ ಸ್ಥಿತಿಯಲ್ಲಿದ್ದ ನನ್ನ ಸೌಂದರ್ಯ ಪ್ರಜ್ಞೆಯನ್ನು ಎಚ್ಚರಿಸಿ ಅದಕ್ಕೆ ನಿಸರ್ಗ ಪ್ರೇಮದೀಕ್ಷೆಯನ್ನಿತ್ತು ನನ್ನನ್ನು ಪ್ರಕೃತಿ ಉಪಾಸನೆಗೆ ನಿವೇದಿಸಿತು" ಎಂದು ತಮ್ಮ ಆತ್ಮಚರಿತ್ರೆ 'ನೆನಪಿನದೋಣಿಯಲ್ಲಿ' ಹೇಳಿ ಕೊಂಡಿದ್ದಾರೆ. ಹುಟ್ಟೂರಿನ ಪರಿಸರ ಕವಿತನವನ್ನು ಪ್ರಬುದ್ಧಗೊಳಿಸಿ ಮಹಾಕವಿಯನ್ನಾಗಿಸಿತು.

ಮಹಾಕವಿಯ ವಿದ್ಯಾಭ್ಯಾಸವೆಲ್ಲಾ ಮೈಸೂರಿನಲ್ಲೇ ಸಾಗಿತು. ಅವರ ಪ್ರತಿಭೆ ಮಹೋನ್ನತ ಸ್ತರ ಏರುವಲ್ಲಿ ಮೈಸೂರು ಸಹ ಪ್ರಮುಖಪಾತ್ರವನ್ನು ವಹಿಸಿದೆ. ಅವರ ಕಾಲೇಜು ವ್ಯಾಸಂಗ ಮಹಾರಾಜಕಾಲೇಜಿನಲ್ಲಿ ಸಾಗಿತು. ಆಗವರು ಶ್ರೀ ರಾಮಕೃಷ್ಣಾ ಶ್ರಮದಲ್ಲಿ ವಸತಿ ಹೂಡಿದ್ದರು. ಅಲ್ಲಿ ಶ್ರೀ ರಾಮಕೃಷ್ಣ ಪರಮಹಂಸರ, ಶ್ರೀ ಮಾತೆ ಶಾರದಾ ದೇವಿಯವರ ಹಾಗೂ ಸ್ವಾಮಿ ಶ್ರೀ ವಿವೇಕಾನಂದರ ಪ್ರಭಾವಕ್ಕೆ ಒಳಗಾದರು. ಸಹ್ಯಾದ್ರಿಯ ಕಂದನಿಗೆ ಶ್ರೀ ರಾಮಕೃಷ್ಣಾಶ್ರಮದ ಅಧ್ಯಾತ್ಮಿಕ ಪರಿಸರ ನವಚೈತನ್ಯ ನೀಡಿತು. ಸುಪ್ತವಾಗಿ ಅಡಗಿದ್ದ ಪ್ರತಿಭೆಯನ್ನು ಹುರಿದುಂಬಿಸಿತು. ನವೋ ಜ್ವಲ ಕಾಂತಿ ನೀಡಿತು. ಸ್ವಾಮಿ ಸಿದ್ದೇಶ್ವರಾನಂದರ ಮಾರ್ಗದರ್ಶನ ದೊರಕಿತು. ತಾನಾಗಿಯೆ ಅವರಲ್ಲಿ ಪರಮಹಂಸರ ಸರ್ವಧರ್ಮ ಸಮನ್ವಯ ತತ್ವ ಮನೆಮಾಡಿತು ವಿವೇಕಾನಂದರ ವೇದಾಂತ ನಡೆವ ಹಾದಿಗೆ ಬೆಳಕು ಚೆಲ್ಲಿತು. ಅರವಿಂದ ಮಹರ್ಷಿಗಳ ಪೂರ್ಣದೃಷ್ಟಿಯನ್ನೂ ಮಹಾತ್ಮಾಗಾಂಧೀಜಿಯವರ ಮೂಲಮಂತ್ರವಾದ ಸರ್ವೋದಯ ತತ್ವವನ್ನು ಅರಗಿಸಿಕೊಂಡರು. ಕುವೆಂಪು ದಾರ್ಶನಿಕಶಕ್ತಿ ದಾಂಗುಡಿಯಿಟ್ಟಿತು.

'ಗುರು'ವನ್ನು ಭಾರತೀಯರು ಪರಬ್ರಹ್ಮನೆಂದು ಕರೆದಿದ್ದಾರೆ 'ಗು' ಎಂದರೆ ಕತ್ತಲನ್ನು, 'ರು' ಎಂದರೆ ನೀಗುವವನು ಎಂದು ಅರ್ಥೈಸುತ್ತಾರೆ. ಅದೇನೆ ಇರಲಿ ಕುವೆಂಪು ಅವರಿಗೆ ದೊರಕಿದ ಗುರುಗಳ ಬಗ್ಗೆ ಹೇಳಲು ಹೆಮ್ಮೆ ಎನಿಸುತ್ತದೆ. ಪ್ರಾಧ್ಯಾ

ಪಕರಾಗಿದ್ದ ತಳುಕಿನ ವೆಂಕಣ್ಣಯ್ಯ' ಎ. ಆರ್. ಕೃಷ್ಣಶಾಸ್ತ್ರಿಗಳಂತ ಅಶ್ವಿನಿದೇವತೆಗಳು ಅವರಿಗೆ ಗುರುಗಳಾಗಿ ದೊರಕಿದ್ದು ನಾಡಿನ ಪುಣ್ಯವಿಶೇಷವೇ ಸರಿ. ಅವರ ಕೃಪೆಯಿಂದ ಕವಿ ಕುವೆಂಪು ಪರಿಪೂರ್ಣಪೆಡೆಗೆ ಸಾಗಿದರು. ಯಾರು ನೀಡದ ಅಮೃತಫಲಗಳನ್ನು ಕೃತಿರೂಪದಲ್ಲಿ ನೀಡಿದರು. ಕವಿಯಾಗಿ, ವಿಮರ್ಶಕರಾಗಿ, ದಾರ್ಶನಿಕರಾಗಿ, ಮಹಾಕವಿಯಾಗಿ ಬೆಳಗಿದರು. ಏಳು ದಶಕಗಳಕಾಲ ನಿರಂತರವಾಗಿ ದುಡಿದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಕವನ, ನಾಟಕ, ಕಾದಂಬರಿ, ವಿಮರ್ಶೆ, ಬಾಲ ಸಾಹಿತ್ಯ, ವಿಚಾರ ಸಾಹಿತ್ಯ, ಮಹಾಕಾವ್ಯ ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿ ಕನ್ನಡ ನುಡಿ ಭಂಡಾರ ತುಂಬಿ ಹೋಗಿದ್ದಾರೆ. ಸುಮಾರು ನಾಲ್ಕು ಸಾವಿರ ಭಾವಗೀತೆಗಳನ್ನು ಬರೆದಿತ್ತು ಉಪಕರಿಸಿದ್ದಾರೆ. ರಕ್ತಾಕ್ಷಿ, ಜಲಗಾರ, ಬೆರಳಗೆ ಕೊರಳು, ವಿಚಾರಕ್ರಾಂತಿಗೆ ಆಹ್ವಾನ, ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡತಿ, ಪಕ್ಷಿಕಾಶಿ, ಚಂದ್ರಮಂಚಕೆ ಬಾಚಕೋರಿ ಮುಂತಾದ ಕೃತಿಗಳು ನಾಡಿನ ಸಾಹಿತ್ಯ ಸಂಪತ್ತು ಹೆಚ್ಚಿಸಿವೆ. ಅಷ್ಟೇಕೆ 'ಶ್ರೀ ರಾಮಾಯಣದರ್ಶನಂ' ಒಂದು ಕೃತಿ ಸಾಕು. ಈ ಮಹಾಕಾವ್ಯ ಭುವನದ ಭಾಗ್ಯದಿಂದ ಅವತರಿಸಿಬಂದ ಅಮೂಲ್ಯ ಕೃತಿಯಾಗಿದೆ. ಪಂಪ ಭಾರತ, ಕುಮಾರವ್ಯಾಸ ಭಾರತಗಳಿಗೆ ಸರಿಸಾಟಿಯಾಗಿ ಹಲವು ಶತಮಾನಗಳ ಅನಂತರ ಹುಟ್ಟಿದ ಏಕೈಕ ಅಪೂರ್ವ ಮಹಾಕಾವ್ಯವೆಂದರೆ 'ಶ್ರೀ ರಾಮಯಣದರ್ಶನಂ'. ಬೃಹತ್ತಿನಿಂದ ಮಾತ್ರವಲ್ಲ ಮಹತ್ತಿನಿಂದಲೂ ಸಹ ಅದು ಯುಗದ ಕಾವ್ಯ, ಜಗದ ಕಾವ್ಯ.

ಕುವೆಂಪು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿ, ಕನ್ನಡ ಅಧ್ಯಯನಸಂಸ್ಥೆ ನಿರ್ದೇಶಕರಾಗಿ, ಕುಲಪತಿಗಳಾಗಿ ಸಲ್ಲಿಸಿದಸೇವೆ ಚರಿತ್ರಾರ್ಹವಾದದು. ಮಾನಸಗಂಗೋತ್ರಿ ಅವರ ಮಾನಸ ಶಿಶುವಾಗಿದೆ. ಆ ಮಹಾಸಂಸ್ಥೆ ಕನ್ನಡ ಶಾರದೆಯ ನೆಲೆವೀಡಾಗಿದೆ.

ಕುವೆಂಪು ಅವರ ಬದುಕು ಹೋರಾಟದ ಬದುಕು. ಗ್ರಾಮೀಣ ಯುವಕನೋರ್ವ ಜಗದ ಕವಿಯಾದುದು, ಯುಗದ ಮಹಾಕವಿಯಾದುದು ಸಾಮಾನ್ಯ ಸಂಗತಿಯಲ್ಲ. ಅವರು ಮನುಜಕುಲಕ್ಕೆ ಮಾರಕವಾದ, ಜಡ್ಡುಗಟ್ಟಿದ ಅಂಧಾಚಾರಗಳ ವಿರುದ್ಧ ತಮ್ಮ ಭೀಮಬಲ ಪ್ರದರ್ಶಿಸಿದರು. ಮಡಿವಂತರ ವಿರುದ್ಧ ಸೆಟೆದು ತ್ರಿವಿಕ್ರಮನಾಗಿ ನಿಂತರು. ಸಮ ಕಾಲೀನ ಬದುಕಿಗೆ ಸ್ಪಂದಿಸಿ ಜಗಜಟ್ಟಿಯಾಗಿ ನಿಂತರು. ಸಂಸ್ಕೃತಿ ಧರ್ಮಗಳ ಹೆಸರಿನಲ್ಲಿ ಮಾನವೀಯತೆ ಮರೆತು ಪಾಷಂಡರನ್ನು ಮೆಟ್ಟಿದರು. ಅವರಿಗೆ ಈ ಧೀಶಕ್ತಿ ಒದಗಿದ್ದು ಅವರು ವಿಶ್ವಮಾನವರಾಗಿ, ಮನುಜಮತ ಪ್ರತಿಪಾದಕರಾದುದರಿಂದ ಮಾತ್ರ. ಅವರ ಬದುಕು-ಬರಹ ಎರಡರಿಂದಲೂ ದೊಡ್ಡವರೆಂಬುದು ಸತ್ಯಸ್ಯ ಸತ್ಯ.

—**ಕವಿತಾಕೃಷ್ಣ, ಎಂ.ಎ.,** ಪ್ರಧಾನ ಕಾರ್ಯದರ್ಶಿ, ಅಖಿಲ ಕರ್ನಾಟಕ ನಾಟಕಕಾರ ಪರಿಷತ್ತು ಕ್ಯಾತಸಂದ್ರ, ತುಮಕೂರು–ತಾ.

# ಮಾನವನ ಆದ್ಯ ಕರ್ತವ್ಯ

ಜೀವರಾಶಿಗಳಲ್ಲಿ ಮನುಷ್ಯ ಜನ್ಮವೆಂಬುದು ಅತಿ ದುರ್ಲಭವಾದುದು. ಅವನಿಗಿರುವಷ್ಟು ಬುದ್ಧಿಬಲ, ವಾಕ್ ಶಕ್ತಿ, ಸಂತಸವನ್ನು ಪ್ರಕಟಗೊಳಿಸುವ ಶಕ್ತಿ ಬೇರೆ ಯಾವ ಪ್ರಾಣಿಗೂ ಇಲ್ಲ. ಆದರೆ ಅನೇಕರು ಪ್ರಾಣಿಗಿಂತ ವಿಭಿನ್ನವೂ ಅಲ್ಲ.ಪ್ರಾಣಿಯಂತೆ ಭಕ್ಷಿಸುವುದು' ಮಲಗುವುದು, ಕಾಮಿಸುವುದು, ಕಾಡುವುದು ಇದರಲ್ಲೇ ಸುದೀರ್ಘ ಕಾಲದ ಬದುಕನ್ನು ಸವೆಸುವ ಅವರು ತಮ್ಮ ಹುಟ್ಟಿನ ಸಾರ್ಥಕ್ಯವನ್ನು ಕಂಡುಕೊಳ್ಳಲಾರರು.

"ಪಿಷ್ಟಾದಿರ್ಗುಡ ಸಂಪರ್ಕಾತ್" ಎಂದು ಉಪನಿಷತ್ತುಗಳು ಬೋಧಿಸಿದವು. ಅಂದರೆ ರುಚಿಕರವಲ್ಲದ ಹಿಟ್ಟಿಗೆ ಮಧುರ ಗುಳವುಳ್ಳ ಬೆಲ್ಲವನ್ನು ಬೆರೆಸಿದಾಗ ಅದು ರುಚಿಕರವೆನಿಸುತ್ತದೆ. ಈಜಗತ್ತು ನೀರಸವಾದ ಒಂದು ಪಿಷ್ಟ. ಅದರಲ್ಲಿ ದೈವತ್ವವೆನ್ನುವ ಬೆಲ್ಲವನ್ನು ಬೆರೆಸಲು ಶ್ರಮಿಸಿದರೆ ಎಲ್ಲವೂ ಹಿತಕರವಾಗುತ್ತದೆಂದು ಅದರರ್ಥ. ದೈವತ್ವ ನೆಲೆ ನಿಲ್ಲಲು ಸೌಂದರ್ಯವೂ ಪವಿತ್ರ ಪ್ರೇಮವೂ ನೆಲೆಸಿರಬೇಕು. ಇದನ್ನು ನೆಲೆ ನಿಲ್ಲಿಸುವುದೇ ಮನುಷ್ಯ ಜನ್ಮ ತಳೆದುದರ ಉದ್ದೇಶವೆಂದು ಹೇಳಲಾಗಿದೆ.

ಪಾಂಡವರು ರಾಜಸೂಯಾಧ್ವರವನ್ನು ಮಾಡುವಾಗ ಎಲ್ಲರಂತೆ ಶ್ರೀ ಕೃಷ್ಣನೂ ಅಲ್ಲಿ ಸ್ವಯಂಸೇವಕನಾಗಿ ಕೆಲಸ ಮಾಡಲು ಮುಂದಾದನು, ಧರ್ಮರಾಯನೊಂದಿಗೆ ತನಗೇನಾದರೊಂದು ಕೆಲಸವನ್ನು ಸೂಚಿಸಲು ಹೇಳಿದಾಗ ಧರ್ಮರಾಯ ನಿನಗೆ ಕೆಲಸ ಮಾಡಲು ನಾನು ಸೂಚಿಸುವುದೆ? ನಿನಗೆ ಸರಿ ಅನಿಸಿದುದನ್ನು ನೀನೇ ಮಾಡು" ಎಂದು ಧರ್ಮರಾಯನು ಹೇಳಿದ. ಆಗ ಕೃಷ್ಣನು ಅಲ್ಲಿ ಬಂದ ವಿದ್ವಾಂಸರ ಪಾದಗಳನ್ನು ತೊಳೆಯುವತಂಹ ಕೆಲಸ ಮಾಡಿದನು. ಅದೇ ರೀತಿ ಮಹಾತ್ಮ ಗಾಂಧಿಯವರು ಭಂಗಿಯವರಂತೆಯೇ ಕಕ್ಕಸು ಶುಚಿ ಮಾಡುವ ಕೆಲಸ ಮಾಡುತ್ತಿದ್ದರು. ಹೀಗೆ ಎಲ್ಲರಿಗೂ ಹಿತವಾಗುವಂತಹ ವಿನಯಶೀಲತೆಯನ್ನು ಪ್ರದರ್ಶಿಸುವುದು ಮನುಷ್ಯನಿಗೆ ಅಗೌರವವನ್ನು ತರಲಾರದು. ಅದರಿಂದ ಯಾರು ಸಣ್ಣವರಾಗುವುದಿಲ್ಲ. ನಿಷ್ಕಾಮ ಕರ್ಮವು ಮಾನವೀಯತೆಯನ್ನು ಬೆಳಗಿಸುತ್ತದೆ. ಮನುಷ್ಯನೆನಿಸುವ ಕರ್ಮಗಳಲ್ಲಿ ಅದೂಒಂದು.

"ಪಿತಾಸಿ ಲೋಕಸ್ಯ ಚರಾಚರಸ್ಯ" ಈ ಪ್ರಪಂಚಕ್ಕೆಲ್ಲ ಒಬ್ಬನೇ ತಂದೆ. ಆತ ಚರಾಚರಗಳಿಗೆ ಒಡೆಯನು, ಸಕಲ ಜೀವರಾಶಿಗಳಿಗೆ ಸೂತ್ರಧಾರನಾದ ಪರಮಾತ್ಮನೆಂಬುದನ್ನು ಅರಿತು ಕೊಂಡಿರುವಷ್ಟು ಕಾಲವೂ, ನಾವು ಮಾನವರಾಗಿಯೇ ಇರಬಲ್ಲೆವು. ದೇಹವು ಆತ್ಮನಿಗೆ ಲಭಿಸಿದ ಒಂದು ಅಂಗಿ. ಸತ್ಕರ್ಮ ಮತ್ತು ಧರ್ಮದ ಆಚರಣೆಗಾಗಿ ಇವರ ಸಾಧನವಿದು. ಇದನ್ನು ಬರಿಯ ಭೋಗಾಕಾಂಕ್ಷೆಯ ಪಥದಲ್ಲಿ ನಡೆಸುವುದರಿಂದ ಪುಣ್ಯ ಸಂಪಾದನೆಯಗುವುದಿಲ್ಲ. ನಮ್ಮ ಪಂಚೇಂದ್ರಿಯಗಳೆನಿಸಿ

ಕೊಂಡಿರುವ ಕಣ್ಣು, ನಾಲಿಗೆ, ಮುಂತಾದ ಐದು ಪ್ರಧಾನ ಅಂಗಗಳನ್ನು ಒಂದೇ
ಕಡೆಯಲ್ಲಿ ಇರಿಸಿ, ವಿಸರ್ಜನಾಂಗವನ್ನು ಬಹು ಕೆಳಗೆ ಇರಿಸಿರುವ ಉದ್ದೇಶವಾದರೂ
ಏನು? ಮೇಲಿರುವುದು ಐದು ಹೆಬ್ಬಾಗಿಲುಗಳು. ಇದರ ಮೂಲಕ ಒಳ್ಳೆಯದು
ಮಾತ್ರ ಪ್ರವೇಶಿಸಬೇಕು. ಈ ದೇಹವೇ ದೇವಾಲಯ, ಒಳಗಿರುವ ಜೀವವೇ ಸದಾ
ಶಿವ. ಆತನ ಆರಾಧನೆ ಮಾಡಲೆಂದೇ ಪಂಚ ಅಂಗಗಳು. ಕೆಟ್ಟದನ್ನು ಕಂಡಾಗ ದೃಷ್ಟಿ
ಯನ್ನು ಮುಚ್ಚಿಕೊಳ್ಳಲೆಂದೇ ರೆಪ್ಪೆಗಳ ಸೃಷ್ಟಿಯಾಗಿದೆ. ಅಹಿತವಾದುದನ್ನು ಆಡಬೇಕೆ
ನಿಸಿದರೆ ತಡೆಯಲು ತುಟಿಗಳಿವೆ. ಹೀಗೆ ಮನುಷ್ಯ ಕೆಟ್ಟುದನ್ನು ಮಾಡುವುದಿದ್ದರೆ
ಅದನ್ನು ಪ್ರತಿರೋಧಿಸುವ ಅಂಗಗಳು ಅವನಲ್ಲೇ ಇವೆ. ಮತ್ತೇಕೆ ಆತ ಸತ್ಸಂಗದಲ್ಲಿ
ನಡೆದು ಹುಟ್ಟನ್ನು ಸಾರ್ಥಕಪಡಿಸಿಕೊಳ್ಳಲು ಸಾಧ್ಯವಿಲ್ಲ.

ನಾವು ಹುಟ್ಟುವಾಗಲೇ ಅನೇಕ ಋಣಗಳನ್ನು ಸಂದಾಯ ಮಾಡಬೇಕಾದ
ಹೊರೆಯನ್ನು ಬೆನ್ನಿಗಂಟಿಸಿ ಕೊಂಡಿರುತ್ತೇವೆ. ತಾಯಿ ತಂದೆಗಳಿಗೆ ವಿಧೇಯರಾಗಿದ್ದು
ಅವರ ಸೇವೆಯನ್ನು ಮಾಡುವುದು ಉತ್ತಮ ಕರ್ಮ ಫಲನೀಡುತ್ತದೆ. ಮನೆಗೆ
ಬಂದವನೊಂದಿಗೆ ಪ್ರೀತಿಯಿಂದ ವರ್ತಿಸುವುದು ಆಯುಷ್ಯದ ಕ್ಷಣಗಳನ್ನು ವೃದ್ಧಿ
ಸುವುದು. ಮನಸ್ಸನ್ನು ಮೀರಿಸುವ ಗುರು ಇನ್ನೊಂದಿಲ್ಲ. ಸತ್ಕರ್ಮ, ದುಷ್ಕರ್ಮ
ಗಳೆರಡನ್ನೂ ಪ್ರೇರಿಸುವಂತಹ ಮನಸ್ಸು ಮಾನವನ ಹಿಡಿತದಲ್ಲಿದ್ದರೇನೇ ಆ
ಮನುಷ್ಯನೆನ್ನಿಸುತ್ತಾನೆ.

ದೇವರು ಒಂದು ವಿಶಾಲವಾದ ಮರವಾದರೆ ಮನುಷ್ಯನೊಂದು ಬಳ್ಳಿ. ಈ
ಎರಡಕ್ಕೂ ಒಂದನ್ನೊಂದು ಅಪ್ಪಿ ಹಿಡಿಯುವ ಸಂಬಂಧವಿದೆ. ಪ್ರೇಮಪ್ರವಾಹದಲ್ಲಿ
ಈಜಿದರೆ ಭಗವಂತನನ್ನು ಸೇರಲೇನೋ ಸುಲಭ. ಆದರೆ ಈ ಪ್ರವಾಹದುದ್ದಕ್ಕೂ
ಹೆಬ್ಬಂಡೆಗಳಿವೆ. ದುರಾಶೆ, ಕ್ರೋಧ, ಅನೃತ, ಪರನಿಂದೆ, ಮತ್ಸರ ಮುಂತಾಗಿ ಹಲ
ವಾರು ಎಡರು ತೊಡರುಗಳು ಎದುರಾಗುತ್ತವೆ. ಈ ತೊಂದರೆಗಳನ್ನು ನಿವಾರಿಸಿ
ಕೊಳ್ಳಲು ಮಾನವ ಒಬ್ಬ ತ್ಯಾಗಿಯಾಗಬೇಕು. ಪ್ರಾಪಂಚಿಕ ಆಮಿಷಗಳನ್ನು ಯಾ
ದೃಢ ಚಿತ್ತದಿಂದ ತ್ಯಾಗಮಾಡುತ್ತಾರೋ ಅವರಿಗೆ ಭಗವಂತನನ್ನು ಸೇರಲು ಸಾಧ್ಯ.

ಹೃದಯ ಶುದ್ಧಿಯಿಲ್ಲದವನಿಗೆ ಸತ್ಕರ್ಮಗಳಲ್ಲಿ ನಿಷ್ಠೆ ಉಳಿಯಲಾರದು. ಈನಿ
ಇರದವನು ಮಾನವನೆಂಬ ಹೆಸರನ್ನು ಅನ್ವರ್ಥಗೊಳಿಸಲಾರ. ಹೃದಯ ಪರಿಶುದ್ಧಿ
ಸಾಧಿಸಲು ಮುಖ್ಯವಾದುದು ಸತ್ಸಂಗ. ಸತ್ಸಂಗವೆಂಬುದು ಬರಿಯ ಸಾಧು ಸಂತ
ಸಂಗವೇ ಆಗಬೇಕಿಲ್ಲ. ಅದು ಪುಸ್ತಕಗಳೂ ಆಗಿರಬಹುದು. ಅಹರ್ನಿಶಿ ಮನುಷ್ಯನಿ
ಸೇವೆ ಮಾಡುವ ಪ್ರಾಣಿಯೂ ಆಗಿರಬಹುದು. ಒಂದು ಅನುಕರಣೀಯ ಆದರ್ಶದಿಂ
ಜಗತ್ತನ್ನು ಸುಂದರಗೊಳಿಸಲು ಸಾಧ್ಯವುಂಟು.

ಕೆಟ್ಟ ಭಾವನೆಗಳು ಹೃದಯವನ್ನು ಕಲುಷಿತಗೊಳಿಸಿದಾಗ ದೃಢ ಬುದ್ಧಿಯು ಅದನ್ನು ನಿವಾರಿಸೀತು. ನಾವು ದೊಡ್ಡ ತುತ್ತು ಅನ್ನವನ್ನು ತಿನ್ನುವಾಗ ಒಂದು ಅತ್ಯಲ್ಪ ಕಲ್ಲಿನ ಹರಳು ಬಂದರೂ ಅದನ್ನು ನಾಲಿಗೆ ಗುರುತಿಸುತ್ತದೆ. ಹಾಗೆಯೇ ನಾವೆಸಗುವ ಯಾವ ಕೆಲಸದಲ್ಲಿಯೂ ಸಮ್ಮಿಶ್ರವಾಗುವ ಕೆಡುಕನ್ನು ಬುದ್ಧಿಯು ಬೆರಳೆತ್ತಿ ತೋರಿಸಬೇಕು. ಈ ದೇಹವನ್ನು ನೋಡಿಕೊಳ್ಳುವ ಹೊಣೆ ಭಗವಂತನದು. ದೇಹವು ಭಗವಂತನಾದರೂ ಅದರ ಮೂಲಕ ಅವನಿಗೆ ಪ್ರಿಯವಾದ ಕೆಲಸವನ್ನು ಮಾಡಿಸುವ ಜವಾಬ್ದಾರಿ ಮೆದುಳಿನದು. ಉತ್ತಮ ಕರ್ಮಗಳನ್ನು ಆಚರಿಸಿದವನ ಹೃದಯವು ಎಲ್ಲ ಕಾಲದಲ್ಲಿಯೂ ಸರ್ವ ಜನರೂ ಸುಖದಲ್ಲಿರಲಿ ಎಂದು ಹಾರೈಸುತ್ತದೆ. ಎಲ್ಲರೂ ಸುಖ ಸಮೃದ್ಧಿಯಿಂದ ಬಾಳಿ ಬದುಕಿ ಭಗವಂತನ ಪ್ರೀತಿ ಭಾಜನರಾಗುವಂತೆ ಸಾಗುವುದೇ ಮಾನವನ ಆದ್ಯ ಕರ್ತವ್ಯ.

—**ಪ. ರಾಮಕೃಷ್ಣ ಶಾಸ್ತ್ರಿ,** ಶಿವಶಕ್ತಿನಿಲಯ ಅಂಚೆ-ಮುಚ್ಚೂರು, ದಕ್ಷಿಣ ಕನ್ನಡ,

"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಂಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

–ಶ್ರೀ ಬಸವೇಶ್ವರ

# ಕ್ಷೇತ್ರ ವಾರ್ತೆ

## ಕನ್ನಡ ರಾಜ್ಯೋತ್ಸವ

**–ಹೆಚ್. ಬಿ. ಗಂಗಾಧರಯ್ಯ**

30 ನವೆಂಬರ್ 1994 ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ 39ನೇ ಕನ್ನಡ ರಾಜ್ಯೋತ್ಸವವನ್ನು ಪರಮ ಪೂಜ್ಯ ಶ್ರೀ ಶ್ರೀಗಳ ದಿವ್ಯ ಸಾನಿಧ್ಯದಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಮುಖ್ಯ ಅತಿಥಿಗಳಾಗಿ ಜ್ಞಾನಪೀಠ ಪ್ರಶಸ್ತಿ ವಿಜೇತ **ಡಾ: ಕೆ. ಶಿವರಾಮ ಕಾರಂತರು** ಮಾತನಾಡಿ ಒಂದು ದೇಶ ದೊಡ್ಡದು ಎನಿಸಬೇಕಾದರೆ ಸಚ್ಚಾರಿತ್ರ್ಯಉಳ್ಳ ಜನಾಂಗವನ್ನು ಅವಲಂಬಿಸಿದೆ. ನಾವು ಏನೆಲ್ಲಾ ಹರಟುತ್ತೇವೆ. ಕೃತಿಗಿಳಿಸಿರುವುದು ಶೂನ್ಯ. ಜಪಾನ್ ಮತ್ತು ಜರ್ಮನ್ ದೇಶಗಳು ಜಗತ್ತಿನಲ್ಲಿ ಅಪಾರ ಕೀರ್ತಿಗೌರವಗಳಿಗೆ ಹೆಸರಾಗಿವೆ. ಈ ಎರಡು ದೇಶಗಳು ಯುದ್ಧಗಳಿಂದ ದಕ್ಷ ಅನುಭವಿಸಿಯೂ ಉತ್ಪಾದನೆಯನ್ನು 3 ರಷ್ಟು ವರ್ಧನೆ ಮಾಡಿವೆ. ಸಂಪತ್ತು ಉತ್ಪಾದನೆ ದುಡಿಯದೆ ಬರುವುದಿಲ್ಲ. ಎಲ್ಲರು ದುಡಿಮೆ ಮಾಡಬೇಕು. ನಡೆ-ನುಡಿಗಳಲ್ಲಿ ದೊಡ್ಡಸ್ತಿಕೆ ಇರಬೇಕು. ಎಲ್ಲರೂ ನಗುತ್ತಾ ಬಾಳಿ ಬದುಕಬೇಕೆಂಬ ಭಾವನೆಬೇಕು. ಪ್ರತಿ ವ್ಯಕ್ತಿ ತನ್ನ ಕಾಲಮೇಲೆ ತಾನು ನಿಲ್ಲಬೇಕು. ನಮ್ಮ ಅನ್ನವನ್ನು ನಾವೇ ದೊರಕಿಸಿಕೊಳ್ಳಬೇಕು. ಪರಾಶ್ರಯದಲ್ಲಿ ಜೀವನ ಸಾಗಿಸಬಾರದೆಂದು ಒತ್ತಿ ಹೇಳಿದರು.

ಅಧ್ಯಕ್ಷತೆ ವಹಿಸಿದ್ದ **ಡಾ: ಎಂ.ಸಿ. ಮೋದಿಯವರು** ಹರಿದು ಹಂಚಿ ಹೋಗಿದ್ದ ನಮ್ಮ ನಾಡು ಪುನಃ ಏಕೀಭವಿಸಿದ ದಿನದ ಸ್ಮರಣೆ ಮಹತ್ವ ಹೊಂದಿದೆ. ಕನ್ನಡ ಸಾಹಿತ್ಯ ಉನ್ನತ ಮಟ್ಟಕ್ಕೆ ಬೆಳೆದಿದೆ. ಶರಣರ ವಚನ ಸಾಹಿತ್ಯವಂತೂ ಸಾಮಾನ್ಯ ಜನರಿಗೆ ಅರಿವು, ಪ್ರಜ್ಞೆ ಮೂಡಿಸುತ್ತದೆ. ಶ್ರೀ ಕಾರಂತರು ನುಡಿದಂತೆ ಯುದ್ಧವೆ ನಡೆದಿಲ್ಲದಂತೆ ಜರ್ಮನ್, ಜಪಾನ್ ದೇಶಗಳು ಪ್ರಗತಿ ಸಾಧಿಸಿವೆ. ಸತ್ಯ, ನಿಷ್ಠೆಯಿಂದ ಅಲ್ಲಿಯ ಜನ ಕ್ರಿಯಾಶೀಲರಾಗಿ ದುಡಿಯುತ್ತಾರೆ. ನಾವು ಎಲ್ಲವನ್ನು ಹೇಳುತ್ತೇವೆ. ಆದರೆ ಆಚರಣೆ ಇಲ್ಲ ಎಂದು ವ್ಯಥೆಯಿಂದ ನುಡಿದರು.

ಶ್ರೀ ಮಠದ ಬಗ್ಗೆ ಮಾತನಾಡಿ ಕೆಲವು ಕಡೆ ಮಠದ ಹೆಸರು ಸಂಪತ್ತಿನಿಂದ ಸ್ವಾಮಿಗಳಾಗಿದ್ದಾರೆ. ಆದರೆ ಇಲ್ಲಿ ಶ್ರೀ **ಶ್ರೀಗಳವರ ನಿರಂತರ ದುಡಿಮೆ, ಶ್ರಮ ಮತ್ತು ಸಾಧನೆಯಿಂದ ಮಠ ಬೆಳೆದುನಿಂತಿದೆ.** ಆದಾಗ್ಯೂ ಕೊರತೆ ನೀಗಿಸಲು ಬೃಹತ್ ಹಾಸ್ಟೆಲ್ ಮತು ಡೈನಿಂಗ್ ಹಾಲ್ ನಿರ್ಮಾಣವಾಗುತ್ತಿವೆ. ಇವು ಶ್ರೀ ಶ್ರೀಗಳವರ ವ್ಯಕ್ತಿತ್ವ ಮತ್ತು ಸಾಧನೆಯನ್ನು ಶತ ಶತಮಾನಗಳ ಮೂಲಕ ಹೇಳುತ್ತವೆ. ಇದರ ಕಾರ್ಯಾಧ್ಯಕ್ಷರಾದ **ಶ್ರೀ ಬಿ.ಎಸ್. ಮುದ್ದಪ್ಪನವರು** ಒಳ್ಳೆಯ ಕಾರ್ಯ ಮಾಡುತ್ತಿದ್ದಾರೆ ಎಂದು ಶ್ಲಾಘಿಸಿದರು.

"ಶ್ರೀ ಶ್ರೀಗಳವರ ಆಶೀರ್ವಚನ" ಕನ್ನಡ ನಾಡು ಕೀರ್ತಿ ಸ್ಥಾನಗಳಿಸಿಕೊಂಡಿದೆ. ಸಚ್ಚಾರಿತ್ರವೇ ನಾಡಿನ ಆಸ್ತಿ. ದೇಶದ ಅಭ್ಯುದಯ ಜನತೆಯ ಹೃದಯ ವೈಶಾಲ್ಯತೆಯು

ಮೇಲೆ ನಿಂತಿದೆ. ಜ್ಞಾನ ಶಕ್ತಿ ಬೆಳೆದು ವಿವೇಕಿಗಳಾದ ನಾಗರಿಕರನ್ನು ನಿರ್ಮಾಣ ಮಾಡುವುದೇ ಶಿಕ್ಷಣದ ಗುರಿ. ನಮ್ಮ ನಾಡಿನ ಸಾಹಿತ್ಯ-ಸಂಸ್ಕೃತಿ ಉಳಿದು ಬೆಳೆಯಬೇಕೆಂದು ಆಶಿಸಿದರು.

ಸಮಾರಂಭದಲ್ಲಿ ಶ್ರೀ ಶ್ರೀಗಳ ವಜ್ರ ಮಹೋತ್ಸವ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪನವರು ಉಪಸ್ಥಿತರಿದ್ದರು. ಪ್ರಾರಂಭಕ್ಕೆ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ ನಡೆಯಿತು. ಹೆಚ್.ಬಿ. ಗಂಗಾಧರಯ್ಯ ಸ್ವಾಗತ ಕೋರಿದರು ಶ್ರೀ ಬ.ಶಿ.ತ.ಸಂ ಶಿಕ್ಷಣಾರ್ಥಿಗಳು ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯನವರ ನಿರ್ದೇಶನದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿ ಕೊಟ್ಟರು ಹೆಚ್.ಎಸ್ ನೀಲಕಂಠಯ್ಯ ವಂದನೆ ಸಲ್ಲಿಸಿದರು.

## ಮಕ್ಕಳ ದಿನಾಚರಣೆ

ದಿನಾಂಕ : 1_12_94 ನೇ ಮಕ್ಕಳ ದಿನಾಚರಣೆಯನ್ನು ಪೂಜ್ಯ ಶ್ರೀಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ಆಚರಿಸಲಾಯಿತು. ಮುಖ್ಯಅತಿಥಿಗಳಾಗಿ ಉಪನ್ಯಾಸ ನೀಡಿದ ಬೆಂಗಳೂರಿನ ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷರಾದ ಡಾ : ಚಿದಾನಂದ ಮೂರ್ತಿಯವರು ಮಾತನಾಡಿ ತಮ್ಮ ಬಾಲ್ಯದ ಹಳ್ಳಿಯ ಜೀವನವನ್ನು ಸ್ಮರಿಸಿದರು. ನಾನು ಬಡತನದಿಂದ ಮೇಲೆಬಂದ ವ್ಯಕ್ತಿ. ನಮ್ಮ ತಂದೆ ಮತ್ತು ಪೂಜ್ಯ ಶ್ರೀ ಶ್ರೀಗಳ ಅನುಗ್ರದಿಂದ ಕಷ್ಟ ಪಟ್ಟು ವ್ಯಾಸಂಗ ಮಾಡಿ ಮೇಲೆ ಬಂದೆ. ಕೋಪದ್ವೇಷಕ್ಕೆ ಮಿತಿಉಂಟು. ಆದರೆ ಪ್ರೇಮ ಪ್ರೀತಿಗೆ ಮಿತಿಯಿಲ್ಲ. ಇದರ ಪ್ರಭಾವವೇ ಶ್ರೀಗಳ ಹೃದಯದಲ್ಲಿ ಸಹಸ್ರ ಸಹಸ್ರ ಬಡ ಮಕ್ಕಳ ಚಿತ್ರಣ ಮೂಡಿರುವುದು. ಅವರ ಪುರೋಭಿವೃದ್ಧಿಗಾಗಿ ದೀರ್ಘಕಾಲದಿಂದ ಶ್ರಮಿಸುತ್ತಿದ್ದಾರೆ. ಇವರು ನಮ್ಮ ನಾಡಿನ ಪುಣ್ಯಜೀವಿಯಾಗಿದ್ದಾರೆ.

ನನಗೆ ಒಳ್ಳೆಹಠ ಇದೆ. ನಾನೊಬ್ಬ ಹುಚ್ಚ. ಒಳ್ಳೆಯ ಕಾರ್ಯ ಮಾಡಲು ತುಂಬ ಉತ್ಸಾಹ. ಈಗಲೂ ಪ್ರಾಥಮಿಕ ಶಾಲೆಗಳಿಗೆ ಹೋಗಿ ಪಾಠ–ಕತೆ ಹೇಳುತ್ತೇನೆ. ಬಡತನದ ಸೊರಗಿದ ಮಕ್ಕಳ ಮುಖಗಳಲ್ಲಿ ಆನಂದ ಉಂಟಾಗುತ್ತದೆ. ಅವರು ಹಿಗ್ಗುತ್ತಾರೆ. ವಿದ್ಯಾರ್ಥಿಗಳು ಕಷ್ಟಪಟ್ಟು ಓದಿ ಉನ್ನತ ಸ್ಥಾನಗಳನ್ನು ಅಲಂಕರಿಸಬೇಕು. ಪ್ರಸ್ತುತದಲ್ಲಿ 3 ಬಗೆಯ ವಿದ್ಯಾರ್ಥಿಗಳನ್ನು ಕಾಣುತ್ತೇವೆ. ಎಂದು ಕಥೆಯ ಮೂಲಕ ಸ್ಪಷ್ಟ ಪಡಿಸಿದರು.

1 ಈ ಕಿವಿಯಲ್ಲಿ ಕೇಳಿದ್ದನ್ನು ಮತ್ತೊಂದು ಕಿವಿಯಲ್ಲಿ ನಿರಾತಂಕವಾಗಿ ಬಿಡುತ್ತಾರೆ.
2 ಕೇಳಿದ್ದು ಅರ್ಥವಾಗಿದೆ ಆದರೆ ಹೇಳಲು ಬರುವುದಿಲ್ಲ.
3 ಕೇಳಿದ್ದು–ಓದಿದೆಲ್ಲಾ ಅರ್ಥಮಾಡಿಕೊಂಡು ಹೇಳುತ್ತಾರೆ. ಇವರೇ ಬುದ್ಧಿವಂತರು.

ಆಲೋಚನೆ ಮಾಡುವುದು ಬುದ್ಧಿವಂತರ ಲಕ್ಷಣ. ಇವರಂತೆ ಇಲ್ಲಿಯ ವಿದ್ಯಾರ್ಥಿಗಳು ಬುದ್ಧಿವಂತರಾಗಿ, ಧೀರರಾಗಿ, ಅಭಿಮಾನದ ಕನ್ನಡ ಯುವಕರಾಗಿ ಬೆಳೆಯಿರಿ ಎಂದು ಹಾರೈಸಿದರು.

ಅಧ್ಯಕ್ಷಸ್ಥಾನದಿಂದ ಕರ್ನಾಟಕ ಪಬ್ಲಿಕ್ ಹೆಲ್ತ್ ಇಂಜಿನಿಯರ್ ವಿಭಾಗದ ಇಂಜಿನಿಯರ್ ಚೀಫ್ ಶ್ರೀ ಎಸ್.ಎಂ. ಪಂಚಗಟ್ಟಿ ಮಾತನಾಡಿ ನಾನು ಒಬ್ಬ ಬಡ ಶಿಕ್ಷಕನ ಮಗ. ಹಳ್ಳಿಯ ಏಕೋಪಾಧ್ಯಾಯ ಶಾಲೆಯಲ್ಲಿ ಓದಿದೆ. ಕಲಿವಿನಲ್ಲಿ ಸ್ಫೂರ್ತಿ ಇತ್ತು. ಆಗ ಕೆಲಸಗಳು ಸುಲಭವಾಗಿ ಸಿಗುತ್ತಿದ್ದವು. ಆದರೆ ಈಗ ಸರ್ಕಾರಿ ಕೆಲಸ ಸಿಗುವುದಿಲ್ಲ. ತಮ್ಮ ತಮ್ಮ ವೃತ್ತಿಗಳಲ್ಲಿ ಉದಾತ್ತೀಕರಣ ಮಾಡಿ ಸ್ವಂತ ಕಾಲ ಮೇಲೆ ನಿಲ್ಲಬೇಕು. ಇದಕ್ಕಾಗಿ ಶ್ರೀ ಶ್ರೀಗಳು ಸತತವಾಗಿ ಶ್ರಮಿಸುತ್ತಿದ್ದಾರೆ. ವಿದ್ಯಾರ್ಥಿಗಳು ತಂದೆ ತಾಯಂದಿರಿಗೆ ಮತ್ತು ನಾಡಿಗೆ ಕೀರ್ತಿ ತರಬೇಕೆಂದು ಹೇಳಿದರು.

**ಶ್ರೀ ಶ್ರೀಗಳವರ ಆಶೀರ್ವಚನ:–** ಪ್ರಸ್ತುತ ಜನತೆ ನಿರಾಸೆ ಹೊಂದಿದೆ. ಪ್ರತಿ ವ್ಯಕ್ತಿ ದೇವನನ್ನು ನಂಬಿ ಸಂಕಲ್ಪ ಮಾಡಬೇಕು. ನಾನು ಚೆನ್ನಾಗಿ ಬಾಳಿ ದೇಶಕ್ಕೆ ಸೇವೆ ಸಲ್ಲಿಸಬೇಕೆಂಬ ಮಹದಾಕಾಂಕ್ಷೆ ಇರಬೇಕು. ದೇಶ ನಿಮ್ಮಿಂದ ಬಹಳ ನಿರೀಕ್ಷೆ ಮಾಡುತ್ತಿದೆ. ಜೀವನದ ಮೌಲ್ಯಗಳು ಇಂದು ನಶಿಸುತ್ತಿವೆ. ನಮಗೆ ಒಳ್ಳೆ ಪರಂಪರೆ ಧರ್ಮ ಮತ್ತು ಸಂಸ್ಕೃತಿ ಇದೆ. ವಿದ್ಯಾರ್ಥಿಗಳ ಜೀವನ ಸಮಾಜದಲ್ಲಿ ಒಳ್ಳೆಯ ವಾತಾವರಣ ಮೂಡಿಸುವಂತಾಬೇಕೆಂದು ಆಶಿಸಿದರು.

ಪ್ರಾರಂಭಕ್ಕೆ ಶ್ರೀ ಎಸ್. ಶಿವಕುಮಾರ್ ಸ್ವಾಗತ ಕೋರಿದರು. ಹೆಚ್.ಎಸ್. ನೀಲಕಂಠಯ್ಯ ವಂದನೆ ಸಲ್ಲಿಸಿದರು. ಶ್ರೀ ಎ.ಎಸ್. ನಂಜಮರಿ ಕಾರ್ಯ ಕ್ರಮ ನಿರೂಪಿಸಿದರು.

# ವಿದ್ಯಾರ್ಥಿಗಳಿಗೆ ಸಂದೇಶ

ಶ್ರೀ ಮಠದ ದರ್ಶನಭಾಗ್ಯ ಯೋಗವೆಂದು ಭಾವಿಸಿದ್ದೇನೆ. ಗಂಗೆಯಲ್ಲಿ ಮಿಂದಿದ್ದೇನೆ. ಇಲ್ಲಿ ವಿದ್ಯಾರ್ಥಿಗಳ ಸಾಗರವಿದೆ. ಇದಕ್ಕೆ ಕಾರಣ ಮಹಾ ಶ್ರೀಗಳು. ಐಹಿಕ ಸಂಪತ್ತಿನಿಂದ ಆಧ್ಯಾತ್ಮಿಕ ಶಕ್ತಿ ಬೆಳೆಸುವುದು ಸಾಮಾನ್ಯ ಕೆಲಸವಲ್ಲ. ಜಗದ್ವಿಖ್ಯಾತವಾದ ಅದ್ಭುತಕಾರ್ಯ ಇಲ್ಲಿ ನಡೆದಿದೆ. ಎಲ್ಲೆಲ್ಲೂ ದ್ವೇಷವಿರುವಲ್ಲಿ ಇಂಥ ಕರುಣೆ ಹೇಗೆ ಇಲ್ಲಿ ಬೆಳೆದು ಬಂದಿದೆ? ಶ್ರೀ ಶ್ರೀಗಳು ಮಹಾಪುರುಷರು. ಬಸವೇಶ್ವರರ ಪವಾಡವನ್ನು ಸಾಧಿಸಿದ್ದಾರೆ. ಭಗವಂತನ ಸತ್ವದಿಂದ ಇಂಥ ಶಕ್ತಿ ಬಂದಿದೆ. ಶ್ರೀ ಬಸವೇಶ್ವರರ ಅಂಶ ಇವರಲ್ಲಿ ಇದೆ. ಬಡತನ, ವ್ಯಾಧಿ, ಅಜ್ಞಾನ ನಿರುತ್ಸಾಹ, ನಿರುದ್ಯೋಗ ಮುಂತಾದವು ದೇಶವನ್ನು ಕಾಡುತ್ತಿವೆ. ಅಜ್ಞಾನವನ್ನು ಮೊದಲು ಓಡಿಸಬೇಕು. ಆಗ ಸಮಾಜ ನಗುತ್ತದೆ. ಎಲ್ಲರೂ ಆನಂದಿಸಬೇಕು. ಮನುಷ್ಯ ಈ ಲೋಕಕ್ಕೆ ಬಂದ ದೇವತ್ವ ಪುರುಷ. ಶ್ರೀ ಶ್ರೀಗಳು ಮಾನವ ಪುಷ್ಪಗಳನ್ನು ಅರಳಿಸುವ ಕಾರ್ಯ-ಮಾಡುತ್ತಿದ್ದಾರೆ. ಶಿಕ್ಷಣ ಎಂದರೆ ಸಂಸ್ಕೃತಿಯ ಅರಿವು ಮತ್ತು ಬದಲಾವಣೆ. ನಮ್ಮ ವರ್ತನೆ ಮತ್ತು ಮನೋಭಾವನೆಗಳಲ್ಲಿ ಉದಾತ್ತೀಕರಣವಾಗಬೇಕು. ಇಡೀ ಭಾರತವೇ ಸಿದ್ಧಗಂಗೆಯಾಗಬೇಕು. ಸಿದ್ಧಗಂಗಾ ಪ್ರವಾಹ ಭರತ-ಖಂಡದಲ್ಲಿ ಪ್ರವಹಿಸಲಿ ಎಂದು ಹಾರೈಸಿದರು.

20 ನವೆಂಬರ್ 1994

–ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್,
(ಎಚ್. ಎಸ್. ಕೆ.) ಮೈಸೂರು.

# ಶ್ರೀ ಶ್ರೀಗಳ ವಜ್ರಮಹೋತ್ಸವ ಪ್ರತಿಷ್ಠಾನದ ಚಟುವಟಿಕೆ–ಮುನ್ನಡೆ

ಈ ಪ್ರತಿಷ್ಠಾನದ ಕಾರ್ಯಾಧ್ಯಕ್ಷರಾದ ಶ್ರೀ ಬಿ. ಎಸ್. ಮುದ್ದಪ್ಪನವರು 14-12-94 ಬುಧವಾರ ಎಸ್.ಐ.ಟಿ ಬಿರ್ಲಾ ಸಭಾಂಗಣದಲ್ಲಿ ಪೂಜ್ಯ ಶ್ರೀಶ್ರೀಗಳವರ ಅಧ್ಯಕ್ಷತೆಯಲ್ಲಿ ಶ್ರೀ ಜಿ ಪರಮೇಶ್ವರಪ್ಪನವರಿಗೆ ನೀಡಿದ ಸನ್ಮಾನ ಸಮಾರಂಭದಲ್ಲಿ ಕಾರ್ಯಚಟುವಟಿಕೆಗಳ ಬಗ್ಗೆ ಮಾತನಾಡಿದರು. ಸಭೆಯಲ್ಲಿ ಪ್ರತಿಷ್ಠಾನದ ಕಾರ್ಯ ಮಂಡಲಿಯ ಸದಸ್ಯರು' ಶಿಕ್ಷಕವರ್ಗ ಮತ್ತು ಹಿತೈಷಿಗಳು ಪಾಲ್ಗೊಂಡಿದ್ದರು.

ಎಸ್.ಐ.ಟಿ. ಮಾಜಿ ಪ್ರಾಂಶುಪಾಲರಾದ ಶ್ರೀ ಜಿ. ಪರಮೇಶ್ವರಪ್ಪನವರು ನಾಲ್ಕು ತಿಂಗಳ ಕಾಲ ಅಮೇರಿಕಾದ್ಯಂತ ಸಂಚರಿಸಿ ವಜ್ರ ಮಹೋತ್ಸವ ನಿಧಿಗಾಗಿ ಸುಮಾರು 25 ಲಕ್ಷರೂಗಳನ್ನು ಸಂಗ್ರಹಿಸಿದ ಸ್ಮರಣೆಗಾಗಿ ಸನ್ಮಾನ ನೀಡಿ ಗೌರವಿಸಲಾಯಿತು. ಅಮೇರಿಕದಲ್ಲಿ ಕನ್ನಡಿಗರು ಅಪಾರ ಸಂಖ್ಯೆಯಲ್ಲಿ ಉದ್ಯೋಗದಲ್ಲಿದ್ದಾರೆ. ಎಲ್ಲಾ ಜಾತಿ ಪಂಥಗಳಿಗೆ ಸೇರಿದವರು ಆತ್ಮೀಯವಾಗಿ ನನ್ನನ್ನು ನೋಡಿ ಕೊಂಡು ಉಪಚಾರ ಮಾಡಿ ಶಕ್ತಿ ಮೀರಿ ನಿಧಿ ಸಂಗ್ರಹಣೆಗೆ ನೆರವಾಗಿದ್ದಾರೆ. ಕೆಲವರು 50,000 ರೂ ಗಳಂತೆ ನೀಡಿ ಕೊಠಡಿಗಳನ್ನು ನಿರ್ಮಿಸಲು ಒಪ್ಪಿರುವುದು ಸಂತೋಷವನ್ನುಂಟು ಮಾಡಿದೆ. ಇಷ್ಟು ನಿಧಿ ಶೇಖರಣೆ ಮತ್ತು ಪ್ರೋತ್ಸಾಹ ಸಿಗುತ್ತದೆ ಎಂಬ ಭರವಸೆ ಇರಲಿಲ್ಲ. ಶ್ರೀ ಶ್ರೀಗಳ ಬೃಹತ್ ಕಾರ್ಯಚಟುವಟಿಕೆಗಳನ್ನು ವಿಡಿಯೋ ಕ್ಯಾಸೆಟ್ ಮೂಲಕ ಪ್ರದರ್ಶಿಸಿದಾಗ ಎಲ್ಲರೂ, ಅಲ್ಲದೆ ಅಮೇರಿಕದ ನಾಗರಿಕರು ಸ್ಫೂರ್ತಿಪುಳ್ಳರಾಗಿ ಅಭಿಮಾನದಿಂದ ವಂತಿಕೆ ನೀಡುತ್ತಿದ್ದುದು ಮಹದಾನಂದ ಉಂಟುಮಾಡುತ್ತಿತ್ತು. ಇದಕ್ಕೆಲ್ಲಾ ಶ್ರೀ ಶ್ರೀಗಳವರ ಕರುಣೆಯ ಸೇವಾ ಸಾಗರದ ಪ್ರಭಾವ. ನಾನು ಅಲ್ಲಿ ನಿಮಿತ್ತ ಮಾತ್ರ. ಶ್ರೀ ಶ್ರೀಗಳವರ ಕಾರ್ಯ ಕ್ಷೇತ್ರ ಅಂತಹ ಸತ್ ಪರಿಣಾಮ ಮಾಡಿತು ಎಂದು ಶ್ರದ್ಧಾಭಕ್ತಿ ಭಾವದಿಂದ ಶ್ರೀ ಪರಮೇಶ್ವರಪ್ಪ ನುಡಿದರು.

ಶ್ರೀ ಬಿ. ಎಸ್ ಮುದ್ದಪನವರು ಮಾತನಾಡಿ ಹಣದ ಕೊರತೆ ತೀವ್ರವಾಗಿದ್ದಾಗ ಜಿ. ಪರಮೇಶ್ವರಪ್ಪನವರು ಅಮೇರಿಕಾ ಪ್ರವಾಸ ಮಾಡಿ ಶಕ್ತಿ ಮೀರಿ ನಿಧಿ ಸಂಗ್ರಹಿಸಿದ್ದಾರೆ. ಈ ಮೂಲಕ ಶ್ರೀ ಮಠದ ಪ್ರಚಾರವೂ ಆಗಿದೆ. ಒಳ್ಳೆಯ ಪ್ರಶಂಸನೀಯವಾದ ಕಾರ್ಯ ಮಾಡಿದ್ದಾರೆ ಎಂದು ಹೇಳುತ್ತಾ ಪ್ರತಿಷ್ಠಾನದ ಪರವಾಗಿ ವಂದನೆಗಳನ್ನು ಸಲ್ಲಿಸಿದರು. ಅವರು ಮುಂದುವರೆದು ಮಾತನಾಡುತ್ತಾ ಹೆಚ್ಚು ಬೆಲೆಯುಳ್ಳ ಆಕರ್ಷಣೀಯವಾದ ಬೃಹತ್ ಹಾಸ್ಟೆಲ್ ಮತ್ತು ಡೈನಿಂಗ್ ಹಾಲ್ ಅವಶ್ಯಕತೆ ಇತ್ತೆ ಎಂಬುದು ಕೆಲವರ ಅಭಿಪ್ರಾಯ. ಕಲ್ಲಿನಿಂದ ಹಾಸ್ಟೆಲ್ ಕಟ್ಟಡ ಮತ್ತು ಸಿಮೆಂಟ್ ಕಾಲಂಗಳಿಂದ ಡೈನಿಂಗ್‌ಹಾಲ್ ನಿರ್ಮಾಣವಾಗುತ್ತಿವೆ. ಇಲ್ಲಿಯವರೆಗೆ 2 ಕೋಟಿ ರೂಗಳು ಖರ್ಚಾಗಿವೆ. ಇನ್ನೂ 2 ಕೋಟಿರೂಗಳು ಪೂರ್ಣವಾಗಲು ಬೇಕು. ಶ್ರೀಶ್ರೀಗಳ ವಜ್ರ ಮಹೋತ್ಸವ ಸ್ಮಾರಕಗಳು ಇವು. ಅವರ ಪೀಠಾಧಿಕಾರದ 64 ವರ್ಷಗಳ

ಸಾಧನೆಯ ಮೇರು ಕೃತಿಯಾಗಿದೆ. ಇದನ್ನು ಪ್ರತಿಬಿಂಬಿಸುವ ಸ್ಮಾರಕ ಭವ್ಯದಿವ್ಯವಾಗಿದ್ದು ಮುಂದಿನ ಪೀಳಿಗೆಯಲ್ಲಿ ಚೈತನ್ಯ, ಸ್ಫೂರ್ತಿ, ಸೇವೆ, ತ್ಯಾಗ, ಸದ್ಭಾವನೆ, ಸಹಕಾರ ಮತ್ತು ಭ್ರಾತೃತ್ವ ಮೂಡಿಸಬೇಕು. ಈ ಉದ್ದೇಶದಿಂದ ಶ್ರೀಗಳವರ ಸೇವಾ ಸಾಗರಕ್ಕೆ ಕುರುಹಾಗಿ ಅದ್ಭುತ ಕಾರ್ಯ ಕೈಗೊಳ್ಳಲಾಗಿದೆ ಎಂದು ಸಮರ್ಥಿಸಿದರು.

ಶ್ರೀ ಮಠಕ್ಕೆ ಕೊಡುಗೈ ದಾನಿಗಳಿದ್ದಾರೆ. ಆದರೆ ಈ ಬಗ್ಗೆ ಜನತೆಯ ಬಳಿ ಹೋಗಿ ನೆರವು ಆಶಿಸುವವರು ಸಾಕಷ್ಟು ಮುಂದಿಬೇಕು. ಈ ದಿಶೆಯಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘ ಕೆಲಸ ಮಾಡುತ್ತಿದೆ. ಆದರೆ ಇದು ಸಾಲದು, ಎಲ್ಲಾ ಹಳೆಯವಿದ್ಯಾರ್ಥಿಗಳು ಯೋಜನೆಗೆ ಸಕ್ರಿಯವಾಗಿ ಪಾಲ್ಗೊಂಡು ಸಂಘಟನೆಯಿಂದ ಕೆಲಸ ಮಾಡಬೇಕೆಂದು ಕೋರಿದರು. ಶ್ರೀ ಮಠದ ಶಿಕ್ಷಣ ಸಂಸ್ಥೆಗಳ ಉಪಾಧ್ಯಾಯರು ಮತ್ತು ಸಿಬ್ಬಂದಿ ವರ್ಗದವರು ತಮ್ಮ ಒಂದು ತಿಂಗಳ ವೇತನವನ್ನು ನಿಡಿದ್ದಾರೆ. ಅವರಿಗೂ ಪ್ರತಿಷ್ಠಾನದ ಪರವಾಗಿ ಧನ್ಯವಾದಗಳನ್ನು ಸಮರ್ಪಿಸಿದರು

ಶ್ರೀ ಮಠಕ್ಕೆ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಮುಖ್ಯ. ಇದು ಪ್ರತಿಷ್ಠಾನ ಯೋಜನೆಯಲ್ಲಿ ಸೇರಿದೆ. ಲೋಕಸಭಾ ಉಪಸಭಾಧ್ಯಕ್ಷರಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಕೇಂದ್ರ ಸರ್ಕಾರದ ನೆರವನ್ನು ಕೊಡಿಸಲು ಆಶ್ವಾಸನೆ ನೀಡಿದ್ದಾರೆ ಎಂದು ಹೇಳಿ ಅವರಿಗೆ ಕೃತಜ್ಞತೆ ಸಲ್ಲಿಸಿದರು.

ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಶ್ರೀ ಎಸ್. ಬಿ. ಹಸಬಿಯವರು ಶ್ರೀ ಶ್ರೀಗಳವರ ಸೇವಾ ಜ್ಯೋತಿಯ ಬೆಳಕು ಪ್ರಜ್ವಲಿಸಿ ಉತ್ತಮ ಪ್ರಭಾವ ಜನಸಮುದಾಯದ ಮೇಲೆ ಉಂಟು ಮಾಡುವುದರಿಂದ ಎಲ್ಲಾ ಕಡೆಯಿಂದಲೂ ಜನತೆ ಉದಾರವಾಗಿ ಸ್ವಯಂ ಪ್ರೇರಣೆಯಿಂದ ಕಾಣಿಕೆ ನೀಡುತ್ತಿದ್ದಾರೆ. ಶ್ರೀ ಶ್ರೀಗಳ ಧ್ಯೇಯ ಆದರ್ಶಗಳು ಲೋಕಪ್ರಿಯವಾಗಿವೆ ಎಂದು ಹೇಳಿದರು.

**ಶ್ರೀ ಶ್ರೀಗಳವರ ಆಶೀರ್ವಚನ :-** ಜಿ. ಪರಮೇಶ್ವರಪ್ಪನವರು ವಿದೇಶ ಪ್ರವಾಸ ಮಾಡಿ ಒಳ್ಳೆ ಕೆಲಸ ಮಾಡಿದ್ದಾರೆ. ಮಠದ ಬಗ್ಗೆ ಹೊರದೇಶದಲ್ಲಿ ಪ್ರಚಾರ ಮಾಡಿರುವುದು ನಿಧಿ ಸಂಗ್ರಹಣೆಗಿಂತಲೂ ಸ್ತುತ್ಯಾರ್ಹ. ಎಷ್ಟೇ ಕಷ್ಟ ಅಡೆತಡೆಗಳು ಬಂದರೂ ಸ್ಥಿರವಾದ ಸಂಕಲ್ಪದಿಂದ ಸಾಧಿಸಬೇಕೆಂಬ ಛಲ ಉಳ್ಳವರು. ಇವರು ಮಾಡಿದ ಈ ಒಳ್ಳೆಯ ಕೆಲಸ ಇತರ ಎಲ್ಲರಿಗೂ ಉತ್ತೇಜನಕಾರಿಯಾಗಿದೆ ಎಂದು ಆಶಯವ್ಯಕ್ತಪಡಿಸಿದರು. ಈ ಮಹಾಪ್ರತಿಷ್ಠಾನದಲ್ಲಿ ಶ್ರೀ ಮುದ್ದಪ್ಪನವರು, ಶ್ರೀಹಸಬಿಯವರು ಶ್ರೀ ನಾಗರಾಜಯ್ಯನವರು, ಶ್ರೀಕುಲಕರ್ಣಿ, ಮತ್ತು ಶ್ರೀ ಶಾಂತಮಲ್ಲಪ್ಪನವರು ಸ್ವಂತ ಕೆಲಸಗಳನ್ನು ಬದಿಗೊತ್ತಿ ಸಂಘಟಿತರಾಗಿ ತುಂಬಾ ಅಭಿಮಾನದಿಂದ ಕೆಲಸ ಮಾಡುತ್ತಿದ್ದಾರೆ. ಇವರೆಲ್ಲರು ಸಂಸ್ಥೆಗೆ ದೊಡ್ಡ ಆಸ್ತಿಯಾಗಿದ್ದಾರೆ. ಅಮೇರಿಕಾದಲ್ಲಿ ನಮ್ಮ ಕನ್ನಡಿಗರು ವಿಶೇಷ ಅಭಿಮಾನದಿಂದ ತುಂಬಾ ನೆರವು ನೀಡಿದ್ದಾರೆ. ನೀಡಿದ ಸಹಕಾರಕ್ಕಾಗಿ ಸಂಸ್ಥೆ, ಮಠ ಸ್ಮರಿಸುತ್ತದೆ.

ಜಗತ್ತಿನಲ್ಲಿ ಬಸವಣ್ಣನವರಿಗೆ ಸಮಾನರಾದ ವ್ಯಕ್ತಿಗಳು ಯಾರೂ ಇಲ್ಲ. ಅವರ ವಚನಗಳಲ್ಲಿ ಅಮೂಲ್ಯವಾದ ಅಂಶಗಳಿವೆ. ದೇಶದ ಸಂಘಟನೆಗಾಗಿ ಕ್ರಾಂತಿಮಾಡಿದರು. ಅವರ ಸಂದೇಶ ಚಿರಂತನವಾದುದು. ಬಸವಣ್ಣನವರನ್ನು ಪೂಜ್ಯ ಶ್ರೀ ಶ್ರೀಗಳವರ ಮುಖಾಂತರ ಕಾಣಬಹುದು. ವಿದ್ಯಾರ್ಥಿಗಳು 100 ವಚನಗಳನ್ನು ಗಟ್ಟಿಮಾಡಿ ಅವುಗಳ ಸಾರವನ್ನು ಅನುಸರಿಸಿ ನಡೆದರೆ ದೇಶಕ್ಕೆ ಒಳ್ಳೆಯದಾಗುತ್ತದೆ. ವಚನಗಳಲ್ಲಿ ಗೀತೆ, ಉಪನಿಷತ್ತು ಎಲ್ಲವೂ ಅಡಕವಾಗಿದೆ. ಶ್ರೀ ಶ್ರೀಗಳಂಥ ಮಹಾಗುರುವಿನಿಂದ ಶ್ರೀಮಠ ಮತ್ತು ನಾಡು ಪಾವನವಾಗಿದೆ. ಅವರ ಆದರ್ಶ ಧ್ಯೇಯಗಳು ಎಲ್ಲಾ ಕಾಲಕ್ಕೂ ಪ್ರಸ್ತುತ ಮತ್ತು ಸ್ಮರಣಾರ್ಹ. ನಾನು ಯಾವ ಮಠಕ್ಕೂ ಹೋಗುವುದಿಲ್ಲ. ಇಲ್ಲಿ ಶಾಂತಿ, ಸಮಾಧಾನ ಸಿಗುತ್ತದೆ. ಮಹಾನ್ ವ್ಯಕ್ತಿಗಳ ಮಾರ್ಗದರ್ಶನ ಇಲ್ಲಿ ದೊರೆಯುತ್ತದೆ. ದೊಡ್ಡವ್ಯಕ್ತಿಗಳ ಜೀವನ ದರ್ಶನ ನಮ್ಮನ್ನು ಉದಾತ್ತಗೊಳಿಸುತ್ತವೆ. ನನಗೆ ಕು.ವೆಂ.ಪು. ಸಹವಾಸ ಮಾರ್ಗದರ್ಶನ ಲಭ್ಯವಾಗದೆಇದ್ದರೆ ದೊಡ್ಡ ಪೋಲಿಯಾಗುತ್ತಿದ್ದೆ. ಎಂದು ಭಕ್ತಿಭಾವ ತುಂಬಿ ನುಡಿದರು. ಶ್ರೀ ಶ್ರೀಗಳು ಎಲ್ಲವನ್ನೂ ಕರುಣಿಸಿದ್ದಾರೆ. ವಿದ್ಯಾರ್ಥಿಗಳು ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡು ಬಾಳಿಬದುಕಬೇಕೆಂದು ಹಾರೈಸಿದರು.

20 ನವೆಂಬರ್ 1994

–ದೇ. ಜವರೇಗೌಡ

(ದೇ. ಜ. ಗೌ.)

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62 ಕೇಂದ್ರ ಕಛೇರಿ : { 72866 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಚನ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13.42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು
-: ನಿರ್ದೇಶಕರು :-
3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಂಧಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು

